

ಪಾನವ ಮಾಡುವೆನು, ನಾ
ಮನದಣಿಯೆ ನಾಮಾಮೃತವ ಪ

ಶ್ರೀನಿವಾಸನ ನಾಮಸುಧಾರಸ
ಏನು ರುಚಿಯೋ ಕಾಣೆ ಜೇನುತುಪ್ಪದಂತೆ ೧

ಸಕ್ಕರೆ ದೆರೆಸಿದ ಚೊಕ್ಕ ಪಾನಕವನ್ನು
ಮಿಕ್ಕು ಮಿಾರುತಲಿದೆ ರಕ್ಕಸಾರಿಯ ಧ್ಯಾನ ೨

ಕದಳಿ ಖರ್ಜೂರ ದ್ರಾಕ್ಷಿ ಅಡಕೆಯಿಮ್ಮಿಗಿಲಾಗಿ
ಮುದ ಕೊಡುವುದು ಜಿಹ್ವೆಗೊದಗಿದಾಕ್ಷಣ ೩

ಕಾಸಿದ ಕೆನೆವಾಲ ದೂಷಿಸುವಂತಿದೆ
ಏಸು ರುಚಿಯೋ ಹರಿದಾಸರೆ ಬಲ್ಲರು ೪

ಹಯವದನನ ನಿರ್ಭಯದಿಂ ಭಜಿಸಲು
ದಯಮಾಡುವ ಸಾಯುಜ್ಯಪದವಿಯನಿತ್ತು ೫

---ಶ್ರೀ ವಾದಿರಾಜರು.







ಸಂದರ್ಶಿಸಿ. ಆನಂದಿಸಿ.

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ
# ಶ್ರೀನಿವಾಸ ಮಂಗಾಪುರ.



# ವಾರ್ಷಿಕ ಬ್ರಹ್ಮೋತ್ಸವಗಳು

11--2--93 ರಿಂದ 20--2--93

## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ಸಂಜೆ |
|---|---|---|---|
| 11--2--93 | ಗುರುವಾರ | ---- | ಅಂಕುರಾರ್ಪಣೆ. |
| 12--2--93 | ಶುಕ್ರವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 13--2--93 | ಶನಿವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 14--2--93 | ಭಾನುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 15--2--93 | ಸೋಮವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 16--2--93 | ಮಂಗಳವಾರ | ಮೋಹಿನೀ ಅವತಾರ | ಗರುಡವಾಹನ. |
| 17--2--93 | ಬುಧವಾರ | ಹನುಮದ್ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 18--2--93 | ಗುರುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 19--2--93 | ಶುಕ್ರವಾರ | ರಥೋತ್ಸವ | ಅಶ್ವವಾಹನ. |
| 20--2--93 | ಶನಿವಾರ | ಚಕ್ರಸ್ನಾನ | ಧ್ವಜಾವರೋಹಣ. |

<u>ಸೂಚನೆ:</u> ಶ್ರೀನಿವಾಸ ಮಂಗಾಪುರ ತಿರುಪತಿಯಿಂದ ಮದನಪಲ್ಲಿಗೆ ಹೋಗುವ ಮಾರ್ಗದಲ್ಲಿ ತಿರುಪತಿಗೆ ಹತ್ತು ಕಿ. ಮೀ. ದೂರದಲ್ಲಿದೆ. ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಹೋಗಿ ಬರಲು ಸ್ಥಳೀಯ ಬಸ್‌ಗಳೂ ಇದ್ದು, ಹತ್ತು ನಿಮಿಷದ ಹಾದಿ. ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುತ್ತವೆ.

**ತಾವೂ ಬನ್ನಿ** **ತಿ. ತಿ. ದೇ.** **ತಮ್ಮವರನ್ನೂ ಕರೆತನ್ನಿ**



ಸಂಪುಟ ೨೩] ಜನವರಿ ೧೯೯೩ [ಸಂಚಿಕೆ ೮

# ವಿಷಯಸೂಚಿ


| | | |
|---|---|---|
| ಸಂಪಾದಕೀಯ | | .....4 |
| ತಿರುಪ್ಪಾವೈ -- ಸ್ವಾಪದೇಶಾರ್ಥ | --ಕೆ. ಕೇಶವನ್ | .....5 |
| ನಾಮಸಂಕೀರ್ತನೆ -- ಒಂದು ವಿಶ್ಲೇಷಣೆ | ---ಬ. ನ. ಗುಂಡೂರಾವ್ | .....9 |
| ಅಶ್ವತ್ಥವೃಕ್ಷ | ---ರಘುಸುತ | .....11 |
| ವೇದಗಳಲ್ಲಿ ಸೂರ್ಯ | ---ಎ. ಸಿ. ಜೋತಿಷಿ | .....14 |
| ತಿರುಮಲೆಯಸ್ವಾಮಿ | --- | .....15 |
| ಶ್ರೀ ವೆಂಕಟೇಶ್ವರ ಸುಪ್ರಭಾತ | --- | .....17 |
| ತಿಲಕರು ಕಂಡ ಗೀತೆ | ---ಡಾ|| ರಾ. ನ. ಅರಳೀಕಟ್ಟಿ | .....25 |
| ಗೋವಾ | ---ಸುಮಿತ್ರಾಶಾನಭಾಗ | .....30 |
| ಭಕ್ತಿಯಲಿ ಭಾಗಣ್ಣ | ---ಕೃಷ್ಣ ಹುನಗುಂದ | .....31 |
| ತುಲಸೀರಾಮಾಯಣ | ---ಡಾ|| ಆರ್. ರಾಮಕೃಷ್ಣ | .....33 |
| ಮಕರಸಂಕ್ರಾಂತಿ | ---ಆರ್. ಜಿ. ಶಾನಭಾಗ | .....35 |
| ವಾರ್ತಾಲಹರಿ | | .....37 |


ಮುಖಚಿತ್ರ :ಶ್ರೀ ವೆಂಕಟೇಶ್ವರಸ್ವಾಮಿ.
ಹಿಂಬದಿಯಲ್ಲಿ :ತಿ. ತಿ. ದೇ. ಉದ್ಯಾನವನ.
ಒಳಗಡೆ : ಭೋಗಿತೇರು -- ಶ್ರೀಕೃಷ್ಣ ಹಾಗೂ ಆಂಡಾಳ್--
(ಶ್ರೀ ಗೋವಿಂದರಾಜಸ್ವಾಮಿ ಆಲಯ) ಸೂರ್ಯಪ್ರಭವಾಹನ, (ತಿರುಮಲೆ)


ಗೌರವ ಸಂಪಾದಕರು :
ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ.ತಿ.ದೇ., ತಿರುಪತಿ.

ಸಂಪಾದಕ :
ಕೆ. ಸುಬ್ಬಾರಾವ್ ಎಂ.ಎ.

ಉಪಸಂಪಾದಕ :
ಬಿ.ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. ---ಸಂ||




ಕಾಲವನ್ನು -- ಬಳಸುವುದು, ಹಾಳುಮಾಡುವುದು, ಉಳಿಸುವುದು, ವ್ಯರ್ಥಮಾಡುವುದು ಕಳೆಯುವುದು, ತಿನ್ನುವುದು, -- ಏನೆಲ್ಲ ಹೇಳಿದರೂ ಅಲಂಕಾರಿಕವೇ ಆಗುತ್ತದೆ. ಕಾಲವನ್ನು ಏನೂ ಮಾಡಲಿಕ್ಕೆ ಆಗದು. ಅದೊಂದು ತರಹೆಯ ಆತ್ಮವಿದ್ದಂತೆ -- ಶಸ್ತ್ರಗಳಿಂದ ತುಂಡರಿಸಲಾಗದ, ನೀರಿನಿಂದ ತೋಯಿಸಲಾಗದ, ದೆಂಕಿಯಿಂದ ದೇಯಿಸಲಾಗದ -- ಸಾಪೇಕ್ಷತೆ. ಸಾಪೇಕ್ಷ ಎಂದರು. ನಿರಪೇಕ್ಷವಾದ ಕಾಲ ಇರಬಹುದೇ? ಎಂದರೆ ಅದರ ಲಕ್ಷಣವೇನು ಎಂಬುದು ಪ್ರಶ್ನೆಯಾಗುತ್ತದೆ.

ಎರಡು ಘಟನೆಗಳ ನಡುವಣ ಅಂತರವನ್ನು ಕಾಲವೆಂದು ಸ್ಥೂಲವಾಗಿ ಹೇಳಬಹುದಾದರೆ ಎರಡು ಘಟನೆ ಇದ್ದಲ್ಲಿ ಮಾತ್ರವೇ ಕಾಲಕ್ಕೆ ಒಂದು ಅಸ್ತಿತ್ವ; ಆಕಾಶವಿದ್ದರೆ ಮಾತ್ರ ದೂರವಿದ್ದಂತೆ. ಎಂದರೆ ಇದು ನಿರಂತರವಾದುದೂ ನಿತ್ಯವಾದುದೂ ಎಂದಾಯಿತು. ಪ್ರಕೃತಿಯಲ್ಲಿ ನಿನ್ನೆ ಇಂದು ನಾಳೆಗಳನ್ನು ಕಲ್ಪಿಸಿಕೊಂಡರೂ, ನಿನ್ನೆಯನ್ನು ನೆನೆಯಬಹುದೇ ಹೊರತು ಪುನರಾವರ್ತನವಾಗದಾಗಿ ನಾಳೆಯೇ ನಿನ್ನೆಯಾಗಬೇಕಷ್ಟೆ, ಎಂದರೆ ಭವಿಷ್ಯವೇ ಭೂತವಾಗಬೇಕೇ ಹೊರತು, ಭೂತ ಭವಿಷ್ಯವಾಗದು.

ಇಂತಲ್ಲಿ -- ನಿತ್ಯವೂ ಪರಿವರ್ತನ ಶೀಲವಾದ ಪ್ರಕೃತಿಯಲ್ಲಿ -- ನಿಮಿಷ, ಪಕ್ಷ, ಮಾಸ, ವರ್ಷಗಳಿಗೇನು ಬೆಲೆ? ಅನಂತ ವಿಶ್ವದಲ್ಲಿ ಈ ಮನುಷ್ಯ ನಿರ್ಮಿತ ದಿವಸ ಸೂಚಿ ನಗಣ್ಯವೇ ಆದರೂ ಮಾನವ ಜೀವನಕ್ಕೆ ಸೂರ್ಯೋದಯದಿಂದ ಸೂರ್ಯೋದಯವನ್ನು ಸೂಚಿಸುವ ದಿನವೆಂಬುದು ಒಂದು ಪ್ರಮುಖ ಘಟಕ. ಮೊದಲಿಗೆ ಮನುಷ್ಯ ಆಕಾಶವನ್ನು ನೋಡಿ ಅಲ್ಲಿನ ನಕ್ಷತ್ರ ಲೋಲಕ ಲೋಕವನ್ನು ಗಮನಿಸಿಯೇ ಕಾಲವನ್ನು ಗಣಿಸುವ ಕಾಯಕದಲ್ಲಿ ತೊಡಗಿ ನಂತರ ಜಲ, ಸೈಕತ, ಲೋಲಕ, ಲೋಹವಿಕಿರಣ ಗಡಿಯಾರಗಳನ್ನು ಹುಟ್ಟಿಸಿಕೊಂಡಿರಬೇಕು ತನ್ನ ಅಗತ್ಯಕ್ಕೆ ತಕ್ಕಂತೆ.

ವಿಶಾಲವಿಶ್ವದಲ್ಲಿದ್ದೇವೆ. ಆಕಾಶವೆಲ್ಲ ನಕ್ಷತ್ರ ಲೋಲಕಗಳೇ ಆಗಿ (ಗಡಿಯಾರದಂಗಡಿಯ ಮುಂದೆ ನಿಂತು ಗಂಟೆ ಎಷ್ಟೆಂದು ಕೇಳಿದರೇನು ಹೇಳಲೇ, ಎಷ್ಟೊಂದು ಗಡಿಯಾರ ಅಂಗಡಿಯಲಿ) ಚಂದ್ರ, ಸೂರ್ಯ, ಸಪ್ತರ್ಷಿಮಂಡಲ, ಧ್ರುವ, ತ್ರಿಶಂಕು, ವ್ಯಾಧ -- ಎಲ್ಲವೂ ಕಾಲವನ್ನು ಸಾಪೇಕ್ಷವಾಗಿ ತಿಳಿಸುತ್ತಲೇ ಇರುವಂತಹ ಪರಿಸ್ಥಿತಿಯಲ್ಲಿ ನಮಗೆ ಚಾಂದ್ರಮಾನ, ಸೌರಮಾನಗಳು ಪ್ರಮುಖವಾದವು, ಅಥವಾ ನಮ್ಮ ಅನುಕೂಲಕ್ಕೆ ಒದಗಿಬಂದವು. ಇವುಗಳಲ್ಲೂ ಹಲವು ವಿಧದ ದಿನ ಸೂಚಿಗಳು. ಕ್ರೈಸ್ತವರ್ಷ, ಶಾಲಿವಾಹನ ವರ್ಷ, ಫಸಲಿ, ವಿಕ್ರಮಶಕೆ, ಇತ್ಯಾದಿ ಅವರವರ ಅನುಕೂಲಕ್ಕೆ ತಕ್ಕಂತೆ, ಸಾಮಾಜಕ, ಸಾಮೂಹಿಕ, ಅಗತ್ಯಗಳಿಗೆ, ಸುಲಭವಾದಂತೆ, ತೋರುವುದನ್ನು ಜನ ಅನುಸರಿಸುತ್ತಾರೆ (ಪ್ರತಿದೇಶದವರೂ ರೇಖಾಂಶಗಳಿಗೆ ತಕ್ಕಂತೆ ಕಾಲವನ್ನು ಗಡಿಯಾರಗಳನ್ನು ಹೊಂದಿಸಿಕೊಂಡು ನಡೆಯುವಂತೆ.)

ಇಂತಲ್ಲಿ ಮಕರ ಸಂಕ್ರಾಂತಿ ಬರುತ್ತಿದೆ. ಸೂರ್ಯ ಚಲನೆಯ ಒಂದು ಪ್ರಮುಖ ಘಟ್ಟ; ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಪರಿವರ್ತನೆ ಆಗುವ ಘಟ್ಟ. ದಕ್ಷಿಣ ಭಾರತದಲ್ಲಿ ಹೊಸ ಭತ್ತ ಮನೆಗೆ ಬರುವಕಾಲವಾದ್ದರಿಂದ ಪೊಂಗಲು ಹಬ್ಬದಕಾಲ, ಹಾಗಾಗಿ ಇಲ್ಲಿ ಒಳಿತನ್ನು ಎಸಗುವ ಹಳೆಯ ಆದರ್ಶಕ್ಕೆ ಮತ್ತೊಮ್ಮೆ ಅಂಕಿತವಾಗಲು ಪರ್ವಕಾಲ. ಎಳ್ಳು ತಿಂದು ಒಳ್ಳೆಯ ಮಾತನಾಡು ಎಂದರು ಹಿರಿಯರು.

-- ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ --

# ತಿರುಪ್ಪಾವೈ-ಸ್ವಾಪದೇಶಾರ್ಥ

ಮಾರ್ಗಶೀರ್ಷಮಾಸ ಬಂದರೆ ನಮಗೆಲ್ಲ ಆಂಡಾಳ್ ವಿರಚಿತ "ತಿರುಪ್ಪಾವೈ" ದಿವ್ಯ ಪ್ರಬಂಧವು ಜ್ಞಾಪಕಕ್ಕೆಬರುವುದು ಎಲ್ಲಾ ಶ್ರೀ ವೈಷ್ಣವ ದೇವಸ್ಥಾನಗಳಲ್ಲಿ ಇದರ ಪ್ರವಚನ ಕಾಲಕ್ಷೇಪ ಎಲ್ಲೆಲ್ಲೂ ಕಂಡುಬರುವುದು ಪ್ರತಿವರ್ಷದ ಮಾಮೂಲು ಪದ್ಧತಿ, ಸಂಪ್ರದಾಯ. ಬೆಳಗಿನ ಜಾವ ಗಂಡು ಹೆಣ್ಣು ಅಬಾಲವೃದ್ಧರೂ ಪಠಿಸುವ ಮೊದಲನೆಯ ತಿರುಪ್ಪಾವೈ ತನಿಯನ್

"ನೀಳಾ ತುಙ್ಗಸ್ತನಗಿರಿ ತಟೀ
ಸುಪ್ತಮುದ್ಬೋಧ್ಯ ಕೃಷ್ಣಂ
ಪಾರಾರ್ಥ್ಯಂ ಸ್ವಂ ಶ್ರುತಿಶತ
ಶಿರಸ್ಸಿದ್ಧ ಮಧ್ಯಾಪಯನ್ತೀಂ
ಸ್ವೋಚ್ಛಿಷ್ಟಾಯಾಂ ಸ್ರಜಿನಿಗಲಿತಂ
ಯಾ ಬಲಾತ್ ಕೃತ್ಯ ಭುಂಕ್ತೇ
ಗೋದಾ ತಸ್ಯೈ ನಮ ಇದಮಿದಂ
ಭೂಯ ಏವಾಸ್ತು ಭೂಯಃ"

ಈ ಪದ್ಯವೂ ಪ್ರಪನ್ನಾಮೃತದಲ್ಲಿ ಪರಾಶರ ಭಟ್ಟರು ಗೋದಾದೇವಿಯನ್ನು ಕುರಿತು ಹಾಡಿದ್ದು. ಇದೇ ಶ್ರೀವೈಷ್ಣವರೆಲ್ಲರೂ ತಿರುಪ್ಪಾವೈ ಅನುಸಂಧಾನ ಮಾಡುವ ಮೊದಲು ಪಠಿಸುವ ತನಿಯನ್, ಇದರ ಅರ್ಥ -- ಶ್ರೀನೀಳಾದೇವಿಯ ತುಂಗಸ್ತನಗಳೆಂಬ ಮಲೆತಪ್ಪಲಲ್ಲಿ ಮಲಗಿ ನಿದ್ರಿಸುತ್ತಿರುವ ಶ್ರೀ ಕೃಷ್ಣನನ್ನು ತಾನು ಮುಡಿದು ತೆಗೆದಿರಿಸಿದ ಮಾಲೆಯಿಂದ ಕಟ್ಟಲ್ಪಟ್ಟವನನ್ನು, ಎಬ್ಬಿಸಿ ಅನಂತ ವೇದಗಳಿಗೆಲ್ಲಾ ಶಿರೋಭಾಗವಾಗಿ ತೋರಿಬಂದ ಉಪನಿಷತ್ತುಗಳಲ್ಲಿ ನಿರ್ಣಯಿಸಲ್ಪಟ್ಟ ತನ್ನ ಶೇಷತ್ವವನ್ನು ಅಂದರೆ ಜೀವಾತ್ಮನನ್ನು ಪರಮಾತ್ಮನ ಅಧೀನ (ದಾಸ) ಎಂಬುವ ವೇದಾಂತ ಸಿದ್ಧವಾದ ತನ್ನ ಪಾರತಂತ್ರ್ಯವನ್ನು ಶ್ರೀ ಕೃಷ್ಣನಿಗೆ ಉಪದೇಶಿಸಿ ಬಲಾತ್ಕಾರದಿಂದ ಅವನನ್ನು ಅನುಭೋಗಿಸಿದ ಶ್ರೀ ಗೋದಾದೇವಿಗೆ ಮತ್ತೆ ಮತ್ತೆ ನಮಸ್ಕಾರ. ಶ್ರೀ ಗೋದಾದೇವಿಯ ಮಹಿಮೆಯನ್ನು ಎಲ್ಲಾ ಆಚಾರ್ಯರು ಕೊಂಡಾಡಿದ್ದಾರೆ. ಶ್ರೀ ವೇದಾಂತ ದೇಶಿಕರು ತಮ್ಮ ಗೋದಾಸ್ತುತಿಯ ಮೊದಲನೆಯ ಶ್ಲೋಕದಲ್ಲಿ ಆಂಡಾಳ್‌ನ್ನು ಕುರಿತು---

ಶ್ರೀ ವಿಷ್ಣು ಚಿತ್ತ ಕುಲನಂದನ ಕಲ್ಪವಲ್ಲೀಂ
ಶ್ರೀ ರಂಗರಾಜ ಹರಿಚಂದನ
ಯೋಗ ದೃಶ್ಯಾಂ
ಸಾಕ್ಷಾತ್ ಕ್ಷಮಾಂ ಕರುಣಯಾ
ಕಮಲಾಮಿವಾನ್ಯಾಂ
ಗೋದಾಮನನ್ಯ ಶರಣಶ್ಶರಣಂ ಪ್ರಪದ್ಯೇ

--ವೈನತೇಯಾಂಶರಾದ, ಮುಕ್ತೈಶ್ವರ್ಯಸಂಪನ್ನರಾದ ಶ್ರೀ ವಿಷ್ಣುಚಿತ್ತರ ಕುಲನಂದನವನದಲ್ಲಿ ಕಲ್ಪತರು. ಶ್ರೀರಂಗರಾಜನಿಗೆ ಹಚ್ಚಿದ ಹರಿಚಂದನ ಯೋಗದಿಂದ ಬೆಳಗುತ್ತಿರುವ, ಕರುಣೆಯಲ್ಲಿ ಸಾಕ್ಷಾತ್ ಭೂದೇವಿಗೆ ಸದೃಶಳಾಗಿರುವ ಗೋದಾದೇವಿಯನ್ನು ಅನ್ಯಗತಿ ಇಲ್ಲದೆ ನಾನು ಶರಣು ಹೋಗುತ್ತೇನೆ. ಗೋದಾ ಎಂಬ ಶಬ್ದಕ್ಕೆ ವಿಲಕ್ಷಣ ವಾಕ್ ಶಕ್ತಿಯನ್ನು ಕೊಡುವವಳು. ಅನುಪಮ ಶ್ರೀ ಸೂಕ್ತಿಮಾಲೆಯನ್ನು ಭಗವಂತನಿಗೆ ಅರ್ಪಿಸಿದವಳು. ಗೋ = ವಾಕ್ಕು ದಾ = ಕೊಡುವಳು. ಇದನ್ನೇ ತಮಿಳಿನಲ್ಲಿ ಶಡಿಕ್ಕೊಡುತ್ತ ನಾಚ್ಚಿಯಾರ್ ಎಂಬುದಾಗಿ ಕರೆದಿದ್ದಾರೆ. ಗೋದಾ ಎಂದರೆ ತನ್ನ ಭಕ್ತರಿಗೆ ಉತ್ತಮ ವಾಕ್ಸಂಪತ್ತಿಯನ್ನು ನೀಡುವವಳು. ಮತ್ತೊಂದು ಅರ್ಥ ಗೋ = ಭೂಮಿಯಿಂದ, ದಾ = ದತ್ತವಾಗಿ ಬಂದವಳು. ಗೋದೆ ಶ್ರೀವಿಷ್ಣುಚಿತ್ತರಿಗೆ ಶ್ರೀವಿಲ್ಲಿಪುತ್ತೂರಿನಲ್ಲಿ ತಮ್ಮ ಆರಾಧ್ಯ ದೇವತೆಯಾದ ವಟಪತ್ರಶಾಯಿಗೆ ಮಾಲಾಕೈಂಕರ್ಯಕ್ಕಾಗಿ ತಮ್ಮ ನಂದನವನದಲ್ಲಿ ಗಿಡಗಳಿಗೆ ಪಾತಿ ತೆಗೆಯುತ್ತಿರುವಾಗ ತುಲಸೀ ಗಿಡದ ಬುಡದಲ್ಲಿ ಸಿಕ್ಕಿದ ಹೆಣ್ಣುಮಗು, ಜನಕ ರಾಜನಿಗೆ ಸೀತೆ ಸಿಕ್ಕಿದಂತೆ. ಇವಳಿಗೆ ಸುಂದರವಾದ ಕೂದಲುಳ್ಳದ್ದರಿಂದ, ಚೆಲುವಿನ ಕೂದಲ ಹೆಣ್ಣುಕೋದೈ. ಜಾತಾಂ ವೈದಿಕ ವಿಷ್ಣುಚಿತ್ತ ತನಯಾಂ ಗೋದಾಮುದಾರಾಂ ಸ್ತುಮಃ ಎಂಬುವುದಾಗಿ ಶ್ರೀ ಗೋದಾಚತುಃಶ್ಲೋಕಿಯಲ್ಲಿ ಆಕೆಯನ್ನು ಕೊಂಡಾಡಿದ್ದಾರೆ.

ವಿಷ್ಣು ಚಿತ್ತರು ತಮ್ಮ ಸಾಕುಮಗಳಿಗೆ ಶ್ರೀಕೃಷ್ಣನ ದಿವ್ಯಲೀಲಾ ಕಥೆಗಳನ್ನು ಹೇಳುತ್ತಿದ್ದರು. ಅವನ ದಿವ್ಯ ಲೀಲೆಗಳನ್ನು ಕೇಳುತ್ತಾ ಅವನ ದಿವ್ಯನಾಮಗಳನ್ನೇ ನೆನೆಯುತ್ತಾ ಅವನನ್ನೇ ಪತಿಯನ್ನಾಗಿ ಮಾಡಿಕೊಳ್ಳಲು ಸಂಕಲ್ಪ ಮಾಡಿದಳು. ಶ್ರೀ ಮದ್ಭಾಗವತದಲ್ಲಿ ಗೋಕುಲದ ಗೋಪಿಕಾಸ್ತ್ರೀಯರು ಉತ್ತಮ ಪತಿಯನ್ನು ಪಡೆಯಲು ಕಾತ್ಯಾಯನೀ ವ್ರತವನ್ನಾಚರಿಸಿದ ಸಂದರ್ಭವನ್ನು ನೆನೆಸಿಕೊಂಡು ಗೋದೆಯು ಪರಮಾತ್ಮನನ್ನು ಪತಿಯನ್ನಾಗಿ ಪಡೆಯಬೇಕೆಂಬ ಆಸೆಯಿಂದ ಪುಳಕಿತಳಾದಳು. ಹಿಂದೆ ಗೋಪಕನ್ಯೆಯರು ಶ್ರೀಕೃಷ್ಣನನ್ನು ಪಡೆಯಲು ಬೆಳಗಿನ ಜಾವ ಎದ್ದು ಯಮುನಾನದಿಯಲ್ಲಿ ಮಿಂದು ಆಚರಿಸಿದ ವ್ರತವನ್ನು ಉದ್ದೇಶವಾಗಿಟ್ಟುಕೊಂಡು ಸಿರಿ ನೋಂಪಿಯನ್ನು ಗೋದೆ ಆಚರಿಸಿದಳು. ಇದನ್ನೇ ಶ್ರೀ ಗೋದಾ ಚತುಃಶ್ಲೋಕಿಯಲ್ಲಿ ಗೋದೆಯನ್ನು ಕುರಿತು

ಕಲ್ಪಾದೌ ಹರಿಣಾಸ್ವಯಂ
ಜನಹಿತಂ ದೃಷ್ಟೇನ ಸರ್ವಾತ್ಮನಾ
ಪ್ರೋಕ್ತಂ ಸ್ವಸ್ಯ ಚ ಕೀರ್ತನಂ
ಪ್ರಪದನಂ ಸ್ವಸ್ಮೈಪ್ರಸೂನಾರ್ಪಣಂ



ಕಂದಾಡೈ ಕೇಶವನ್

ಸರ್ವೇಷಾಂ ಪ್ರಕಟಂ ವಿಧಾತು
ಮನಿಶಂ ಶ್ರೀಧನ್ವಿನವ್ಯೇಪುರೇ
ಜಾತಾಂ ವೈದಿಕ ವಿಷ್ಣುಚಿತ್ತ
ತನಯಾಂ ಗೋದಾಮುದಾರಾಂ ಸ್ತುಮಃ

ಎಂಬುದಾಗಿ ಕೊಂಡಾಡಲ್ಪಟ್ಟಿದೆ. ಶ್ರೀ ಭಗವಂತನ ದಿವ್ಯಾಯುಧಗಳು ಬದ್ಧ ಚೇತನರ ಉಜ್ಜೀವಕ್ಕಾಗಿ ಆಳ್ವಾರ್ ಆಚಾರ್ಯರಾಗಿ ಅವತರಿಸಿ ಅನುಷ್ಠಿಸದೇಕಾದ ಸಂಪ್ರದಾಯವನ್ನು ಬೋಧಿಸಿದರು. ಜಗನ್ಮಾತೆ ಭೂದೇವಿ ತನ್ನ ಭಕ್ತರ ಪ್ರೀತಿಗಾಗಿ ತಾನೇ ಗೋದಾದೇವಿಯಾಗಿ ಅವತರಿಸಿ ತಾನಿದ್ದ ಶ್ರೀ ವಿಲ್ಲಿಪುತ್ತೂರು ನಂದಗೋಕುಲವೆಂದೂ, ತನ್ನ ಸ್ನೇಹಿತೆಯರು ಗೋಪಕನ್ನಿಯರೆಂದೂ ಭಾವಿಸಿ ಕಾತ್ಯಾಯನೀ ವ್ರತಕ್ಕೆ ಸಮಾನವಾದ ಸಿರಿನೋಂಪಿಯನ್ನು ಆಚರಿಸಲು ನಿಶ್ಚಯಿಸಿದಳು. ತನ್ನ ಸ್ನೇಹಿತರಿಗೆಲ್ಲಾ ಮಾರನೆಯ ದಿನ ಬೆಳಗ್ಗೆ ಬೆಳಗಿನ ಜಾವ ಎದ್ದು ಬರಲು ಸೂಚಿಸಿದಳು. ಮಾರನೆಯದಿನ ಬೆಳಗ್ಗೆ ಗೋದೆ ತನ್ನ ಸ್ನೇಹಿತೆಯರೊಡನೆ ಇನ್ನೂ ಮಲಗಿದ್ದವರ ಮನೆಗೆ ಹೋಗಿ ಅವರನ್ನು ಎಬ್ಬಿಸುವ ಸುಂದರ ಪಾಶುರಗಳ ಮಾಲೆಯೇ ತಿರುಪ್ಪಾವೈ. ಪ್ರತಿಯೊಂದು ಪಾಶುರವೂ "ಏಲೋರೆಂಬಾವಾಯ್" ಎಂಬುವುದಾಗಿ ಮುಗಿಯುತ್ತದೆ. ಇದಕ್ಕೆ ಒಂದರ್ಥ ಏಲ್ + ಓರ್ + ಎಂ + ಪಾ +ಆಯ್ ಅಂದರೆ ನಾರಾಯಣನು ನಮ್ಮ ವ್ರತಕ್ಕೆ ಫಲಕೊಡುತ್ತಾನೆ ಎಂಬುವುದಾಗಿಯೂ ಮತ್ತೊಂದು ಅರ್ಥ ಏಲ್+ ಓರ್ + ಎಂಬಾವಾಯ್ ವ್ರತವನ್ನು ಆಚರಿಸಲು ಬನ್ನಿ ಎಂಬುವುದಾಗಿಯೂ ಮತ್ತೊಂದು ಅರ್ಥದಲ್ಲಿ ಏಲ್+ ಓರ್ + ಎಂ + ಪಾವಾಯ್ -- ಎಲೈ ಹೆಣ್ಣೆ ನಾನು ತಿಳಿಸಿದ್ದನ್ನು ಆಲೋಚಿಸು ಎಂಬುವುದಾಗಿಯೂ ಅರ್ಥಮಾಡುತ್ತಾರೆ. ಇನ್ನೊಬ್ಬರು ಏಲ್ = ಶ್ಲಾಘ್ಯವಾಗಿ, ಓರ್ = ಅದ್ವಿತೀಯವಾದ, ಎಂಪಾವೇ = ನಮ್ಮ ವ್ರತವು, ಆಯ್ = ಆಗುವುದು ಎಂಬುವುದಾಗಿಯೂ ಅರ್ಥ ಮಾಡುತ್ತಾರೆ.

ತಿರುಪ್ಪಾವೈಗೆ ಹಲವಾರುವ್ಯಾಖ್ಯಾನಗಳುಂಟು.

೧. ಪೆರಿಯ ವಾಚ್ಚಾನ್ ಪಿಳ್ಳೈರವರ ಮೂವಾಯಿರಪ್ಪಡಿ.

೨. ಅಳಗಿಯ ಮಣವಾಳ ಪೆರುಮಾಳ್ ನಾಯನಾರರವರ ಆರಾಯಿರಪ್ಪಡಿ.

೩. ತಿರುನಾರಾಯಣಪುರದ ಆಯಿರವರ ಈರಾಯಿರಪ್ಪಡಿ ಮತ್ತು ನಾಲಾಯಿರಪ್ಪಡಿ.

೪. ಹಲವು ಪೂರ್ವಾಚಾರ್ಯರು ಪ್ರಸಾದಿಸಿದ ಶಿನ್ನ ಅರುಂಬದಮ್ ಮತ್ತು ಪೆರಿಯ ಅರುಂಬದಮ್ ವ್ಯಾಖ್ಯಾನಗಳು.

ಗೋದಾದೇವಿ ಗೋಕುಲದ ಎಲ್ಲಾ ಹೆಣ್ಣು ಮಕ್ಕಳನ್ನು ಎಬ್ಬಿಸಿ ಜೊತೆಯಲ್ಲಿ ಕರೆದುಕೊಂಡು ಹೊರಟು ಶ್ರೀನಂದಗೋಕುಲದಲ್ಲಿ ಮಲಗಿ ನಿದ್ರಿಸುತ್ತಿದ್ದ ಶ್ರೀ ಕೃಷ್ಣನನ್ನು ಎಬ್ಬಿಸಿ ತಮ್ಮ ಆತ್ಯಂತಿಕ ಕೋರಿಕೆಯನ್ನು ಅವನಿಗೆ ನಿವೇದಿಸಿ ಅವನಿಂದ ಅನುಗೃಹೀತಳಾದಳು. ಉಪನಿಷತ್ ಸಾರಭೂತವಾದ ತಿರುಪ್ಪಾವೈ ಧ್ವನ್ಯರ್ಥಕ್ಕೆ ಪ್ರಧಾನವಾದುದು. ತಿರುಪ್ಪಾವೈ ವ್ಯಾಖ್ಯಾನಕಾರರಾದ, ವ್ಯಾಖ್ಯಾನಚಕ್ರವರ್ತಿ ಬಿರುದಾಂಕಿತರಾದ ಪೆರಿಯ ವಾಚ್ಚಾನ್ ಪಿಳ್ಳೈಯವರ ಪ್ರಕಾರ ತಿರುಪ್ಪಾವೈಯಲ್ಲಿ ವಾಚ್ಯರ್ಥ, ಲಕ್ಷಣಾರ್ಥಗಳು ಹಾಗೂ ಅನೇಕ ವಿಶೇಷಾರ್ಥಗಳು ಇವೆ. ಈ ವಿಶೇಷಾರ್ಥಗಳನ್ನೇ ಸ್ವಾಪದೇಶಾರ್ಥ ಎಂಬುವುದಾಗಿ ಕರೆಯುವ ವಾಡಿಕೆ. ಸ್ವಾಪದೇಶ ಅರ್ಥ ಅಂತರೆ ಅಂತರಂಗವನ್ನು ಅಂತರಾತ್ಮವನ್ನು ಸಂಬೋಧಿಸಿ ಹೇಳುವುದು. ಸ್ವಾಪದೇಶಾರ್ಥ, ಅಂತರಾರ್ಥ, ರಹಸ್ಯಾರ್ಥ ಎಂಬುವುದಾಗಿ ಕರೆಯಲ್ಪಡುತ್ತವೆ. ವಾಚ್ಯರ್ಥವನ್ನು ಅನ್ಯಾಪದೇಶಾರ್ಥ ಎಂಬುವುದಾಗಿ ಕರೆಯಲಾಗಿದೆ. ತಿರುಪ್ಪಾವೈ ತುಂಬಾ ಧ್ವನ್ಯರ್ಥ ಪ್ರಧಾನವಾಗಿದೆ. ಇದೊಂದು ಭಗವತ್ ಪ್ರೇಮದಿಂದ ಕೂಡಿದ ಆಧ್ಯಾತ್ಮಿಕ ಭಾವಗೀತೆ. ಗೂಢಾರ್ಥ, ತತ್ತ್ವಾರ್ಥ ಶಾಸ್ತ್ರಾರ್ಥಗಳ ಸಂಗಮ, ದಿವ್ಯ ಭಾವ ಗಂಗೆ. ಪರಮ ಪವಿತ್ರವಾದ ಪ್ರೇಮಗಾಥೆ. ಭಗವದ್ಗೀತೆಯಂತೆ ಇದು ಭಗವತಿಗೀತೆ. ಆಂಡಾಳ್ ಹಾಡಿದ ಮನೋಹರ ಮೋಕ್ಷಗೀತೆ. ಇದು ವೇದ ತಾತ್ಪರ್ಯವಾದ ತತ್ವಹಿತ ಪುರುಷಾರ್ಥಗಳನ್ನು ಪ್ರತಿಪಾದಿಸುವ ತಿರುಮಂತ್ರ. ಚರಮ ಶ್ಲೋಕ ದ್ವಯಗಳನ್ನು ವಿವರಿಸುವ ಅನುಷ್ಠಾನಕ್ಕೆ ತಕ್ಕಂತೆ ಪ್ರಬಂಧಗೀತೆ."ಜ್ಞಾತವ್ಯಂ ಗುರು ಪರಂಪರೈಯುಂ ದ್ವಯಮುಂ" ಎಂಬ ಲೋಕಾಚಾರ್ಯರ ಶ್ರೀ ಸೂಕ್ತಿಯಂತೆ ಪ್ರತಿಯೊಬ್ಬ ಪ್ರಪನ್ನನಿಗೂ ಅನುಸಂಧಾನಕ್ಕೆ ಯೋಗ್ಯವಾದ ಹೃದ್ಗೀತೆ. ಶ್ರೀ ರಾಮಾನುಜಾಚಾರ್ಯರು ತಿರುಪ್ಪಾವೈಯನ್ನು ಸಕಲಾರ್ಥಗಳ ಸಂಗ್ರಹ ಮತ್ತು ಅನುಷ್ಠಾನಕ್ಕ ಏಕೈಕ ಶ್ರೀಕೋಶ ಎಂಬುವುದಾಗಿ ನಿಶ್ಚಯಿಸಿ ಇದರ ನಿತ್ಯಾನುಸಂಧಾನದಲ್ಲಿಯೇ ಮಗ್ನರಾಗಿ ತಿರುಪ್ಪಾವೈ ಜೀಯರೆಂದೇ ಪ್ರಸಿದ್ಧರಾದರು. ಭಗವದಾರಾಧನ ಸಮಯದಲ್ಲಿ ಪ್ರತಿಯೊಬ್ಬ ಶ್ರೀ ವೈಷ್ಣವ ಗೃಹಗಳಲ್ಲಿ ಸಕಲ ದಿವ್ಯದೇಶಗಳಲ್ಲಿ ದೇವಸ್ಥಾನಗಳಲ್ಲಿ ತಿರುಪ್ಪಾವೈ ಪಾಶುರಗಳನ್ನು ಹಾಡಿಯೇ ಮಂಗಳಾಶಾಸನ ಮಾಡುವ ಪದ್ಧತಿಯನ್ನು ರಾಮಾನುಜರ ಆಜ್ಞೆಯಂತೆ ಇಂದಿಗೂ ನಡೆದು ಬರುತ್ತಿದೆ. ಆದ್ದರಿಂದಲೇ ಶ್ರೀರಾಮಾನುಜಾಚಾರ್ಯರಿಗೆ "ಗೋದಾಗ್ರಜ" ಎಂಬ ಬಿರುದು ಬಂದಿದೆ. ಪೆರಿಯ ವಾಚ್ಚಾನ್ ಪಿಳ್ಳೈರವರು ತಮ್ಮ ತಿರುಪ್ಪಾವೈ ಮೂವಾಯಿರಪ್ಪಡಿ ವ್ಯಾಖ್ಯಾನದ ಅವತಾರಿಕೆಯಲ್ಲಿ---"ದೇಹಾತ್ಮಾಭಿಮಾನಿಗಳುಕ್ಕುಂ ಆತ್ಮಸ್ವರೂಪಮ್ ಕೈವಂದಿರುಕ್ಕುಂ ಋಷಿಗಳುಕ್ಕುಮ್ ಪರ್ವತ ಪರಮಾಣುಪ್ಪೊಟ್ಟೈವಾಶಿಪ್ಪೋರುಂ, ಋಷಿಗಳುಕ್ಕುಂ ಆಳ್ವಾರ್‌ಗಳುಕ್ಕುಂ ಅತ್ತನ್ನೈವಾಶಿಪ್ಪೋರುಂ ............ ಅನಾದಿ ಮಾಯ ಯಾ ಸುಪ್ತಃ ಎನ್ನಿರಪ್ಪಡಿಯೇ ಸಂಸಾರತ್ತಿಲೆ ---ಇತ್ಯಾದಿ. ದೇಹಾತ್ಮಾಭಿಮಾನಿಗಳಿಗೂ ಆತ್ಮಸ್ವರೂಪ ಹೊಂದಿರುವ ಋಷಿಗಳಿಗೂ ಪರ್ವತ ಪರಮಾಣುಗಳಿಗಿರುವಷ್ಟು ಅಂತರ. ಋಷಿಗಳಿಗೂ ಆಳ್ವಾರರಿಗೂ ಅಷ್ಟೇ ಅಂತರ. ಆಳ್ವಾರುಗಳಿಗೂ ಪೆರಿಯಾಳ್ವಾರರಿಗೂ ಅಷ್ಟೇ ಅಂತರ, ಪೆರಿಯಾಳ್ವಾರರಿಗೂ ಗೋದಾದೇವಿಗೂ ಅಷ್ಟೇ ಅಂತರ. ಆಳ್ವಾರಗಳಿಗಿಂತ ಆಂಡಾಳಳಲ್ಲಿ ಹೆಚ್ಚುಗಾರಿಕೆ ಏನು ಎಂದರೆ ಸಂಸಾರದಲ್ಲಿ ಮುಳುಗಿರುವವರನ್ನು ಎಬ್ಬಿಸಿ ಭಗವಂತನನ್ನು ಕಾಣಲು ಸಹಾಯಕರಾದರು ಆಳ್ವಾರುಗಳು. ಇವಳಾದರೋ ತಾನೇ ಹೋಗಿ ಭಗವಂತನನ್ನು ಎಬ್ಬಿಸಿ ಅವನಿಗೆ ಅರ್ಪಿಸಿಕೊಂಡಳು. ಅದು ಅವಳ ಪೆರುಮೆ -- ಎಂಬುವುದಾಗಿ ಪಿಳ್ಳೈರವರು ವ್ಯಾಖ್ಯಾನ ಮಾಡಿದ್ದಾರೆ. ಮೊದಲನೆಯ ಪಾಶುರ-- -

ಮಾರ್‌ಗಳಿತ್ತಿಂಗಳ್ ಮದಿನಿರೈಂದ
ನನ್ನಾಳಾಲ್
ನೀರಾಡ ಪ್ಪೋದು ವೀರ್ ಪೋದು--
ಮಿನೋ ನೇರಿಳೈಯಿರ್
ಶೀರ್‌ಮಲ್‌ಹು ಮಾಯ್‌ಪ್ಪಾಡಿ
ಶೆಲ್ವಚ್ಚಿರುಮಿರ್ ಹಾಳ್
ಕೂರ್ವೇಲ್ ಕೊಡುನ್ತೊಳಿಲನ್
ನಂದಗೋಪನ್ ಕುಮರನ್
ಏರಾರೆಂದ ಕಣ್ಣಿ ಯಶೋದೈ
ಯಿಳಂ ಶಿಂಗಮ್
ಕಾರ್ ಮೇನಿ ಚ್ಚೆಂಗಣ್ ಕದಿರ್
ಮದಿಯಂ ಪೋಲ್ ಮುಗತ್ತಾನ್
ನಾರಾಯಣನೇ ನಮಕ್ಕೇ
ಪರೈ ತರುವಾನ್
ಪಾರೋರ್ ಪುಗಳ ಪ್ಪಡಿನ್ದು
ಲೋರೆಂಬಾ ವಾಯ್

ಸರಳಾರ್ಥ :-- ಮಾರ್ಗಶಿರ ಮಾಸದ ಶುಕ್ಲ ಪಕ್ಷದ ಈ ಶುಭದಿನದಂದು ನೀರಾಡಲು ಬನ್ನಿ ! ಸುಂದರ ಆಭರಣವುಳ್ಳವರೆ! ಗೋಸಂಪತ್ತಿನಿಂದ

**ಕೂಡಿದ** ಗೋಕುಲದ ಸೊಬಗಿನ ಯುವತಿಯರೆ! **ವೇಲಾಯುಧವನ್ನು** ಹಿಡಿದ ಕ್ರೂರನಂದಗೋಪ **ಕುವರ!** ಚೆಲುವ ಕಣ್ಣಿಳ ಯಶೋದೆಯ ಎಳ ಸಿಂಗ! ಕಾರ್ಮೇಘದೊಡಲ ಚೆಂಗಣ್ಣ. ರವಿ ಚಂದ್ರ ರನ್ನು ಪೋಲುವ ಮೊಗದ ನಾರಾಯಣ!! ನಮಗೆ ಪರೈ ಕೊಡವನು. ಲೋಕದ ಜನ ಪೊಗಳುವಂತೆ ಮಾಯಿರಿ. ಇದೇ ನಮ್ಮ ವ್ರತ.

**ಈ** ಪಾಶುರಕ್ಕೆ ಸ್ವಾಪದೇಶಾರ್ಥ:-- ನಾರಾಯಣ ಎಂಬುವುದರಿಂದ ಪರಮಾತ್ಮನ ಸ್ವರೂಪ. ನಮಗೆ ಎನ್ನುವುದರಿಂದ ಜೀವ ಸ್ವರೂಪ, ನೀರಾಡಲು ಬನ್ನಿ ಎಂಬುವುದರಿಂದ ಉಪಾಯ ಸ್ವರೂಪ. ಪರೈ ತರುವಾನ್ ಎಂಬುವುದರಿಂದ ಫಲ ಸ್ವರೂಪ ಸೂಚಿತ ವಾಗುತ್ತೆ. ಶ್ರೀಮನ್ನಾರಾಯಣನೇ ಪರತತ್ವ, ಅದು ಪ್ರಾಪ್ಯ. ಅವನಲ್ಲಿ ಶರಣಾಗುವುದ ಹಿತ. ಅವನ ಕೈಂಕರ್ಯ ಮುಕ್ತಿಗೆ ಹೇತು ಅದೇ ಪುರುಷಾರ್ಥ. ಪ್ರಾಪ್ಯ. ಪ್ರಾಪಕ. ಉಪಾಯ. ಉಪೇಯ ಎಲ್ಲವೂ ಶ್ರೀಮನ್ನಾರಾಯಣನೇ ಎಂಬುವ ತತ್ವ ಸಾರ ತಿರುಪ್ಪಾವೈಯಲ್ಲಿ ಆಂಡಾಳ್ ಲೋಕಹಿತ ಕ್ಕಾಗಿ ನೀಡಿದ ದ್ರಾವಿಡವೇದ. ಮೊದಲಿನ ಪಾಶು ರದ 'ಮಾ ಅಕ್ಷರದ ಅರ್ಥ ತಿರು, ಶ್ರೀ,' ಲಕ್ಷ್ಮೀ' ಎಂಬುವುದು. ಪಾವಾಯ್ ಅರ್ಥ ವ್ರತ ಎಂಬು ವುದಾಗಿ ಪರೈ = (ಪರಮ ಪುರುಷಾರ್ಥ, ಸ್ವಾಮಿ ಅನುಗ್ರಹ, ಇಷ್ಟಾರ್ಥಸಿದ್ಧಿ) ಎಂಬುವುದಾಗಿ. ಮೊದ ಲಿನ ಪಾಶುರದಿಂದ ಐದನೆಯ ಪಾಶುರದ ವರೆಗೂ ಭಗವಂತನ ಪರ, ವ್ಯೂಹ, ವಿಭವ, ಅರ್ಚಾ, ಅಂತ ರ್ಯಾಮಿ ರೂಪಗಳ ವಿವರಣೆ. ಮೆಲ್ನೋಟಕ್ಕೆ ಸಖಿಯರನ್ನು ಕರೆದು ನೀರಾಡಲು ಬನ್ನಿ ಎಂಬು ವುದು ಮಾತ್ರ. ಆದರೆ ಪರರೂಪ ನಾರಾಯ ಣನಧ್ಯಾನ ಎರಡನೆಯ ಪಾಶುರದಲ್ಲಿ 'ಪಾರ್ಕಡ ಲುಳ್ ಪೈಯತ್ತು ಯಿನ್ರ ಪರಮನಡಿ ಪಾಡಿ' ಎಂಬು ವುದರಲ್ಲಿ ಕ್ಷೀರಸಾಗರಲ್ಲಿ ಯೋಗನಿದ್ರೆಯಲ್ಲಿರುವ ಪರಮ ಪುರುಷನನ್ನು ಹಾಡಿಪಾಡುವುದರ ಅರ್ಥ ಶೇಷಶಾಯಿ ಶ್ರೀಮನ್ನಾರಾಯಣನ ವ್ಯೂಹರೂಪವ ರ್ಣನೆ. ಭಗವತ್ ಕೈಂಕರ್ಯದಲ್ಲಿ ತೊಡಗಿರುವ ಪ್ರಪನ್ನನಿಗೆ ಮಾಡಬೇಕಾದ ಧರ್ಮ, ಬಿಡಬೇಕಾದ ಧರ್ಮವನ್ನು ಈ ಎರಡನೆಯ ಪಾಶುರದಲ್ಲಿ ತಿಳಿ ಸಲಾಗಿದೆ. ಕೆಲವರು ಆರು ತತ್ವಗಳು ದ್ವಯ ಹಾಗೂ ಚರಮ ಶ್ಲೋಕದ ಅರ್ಥ ಈ ಪಾಶುರದ ಲ್ಲಿದೆ ಎಂಬುವರು. ಮೂರನೆಯ ಪಾಶುರ---

ಓಂಗಿಯುಲಹಳಂದ ಉತ್ತಮನ್
ಪೇರ್ ಪಾಡಿ
ನಾಂಗಳ್ ನಂ ಪಾವೈಕ್ಕು ಚ್ಚಾತ್ತಿ
ನೀರಾಡಿನಾಳ್
ತೀಂಗಿನ್ನಿ ನಾಡೆಲ್ಲಾಂ ತಿಂಗಳ್
ಮುಮ್ಮಾರಿ ಪೆಯ್‌ದು
ಓಂಗು ಪೆರುಂ ಶೆನ್ನಲೂಡು ಕಯಲುಗಳ
ಪೂಂಗುವಳೈಪ್ಪೋದಿಲ್ ಪೊರಿವಂಡು
ಕಣ್ಪಡುಪ್ಪ
ತೇಂಗಾದೇ ಪುಕ್ಕಿರುಂದು ಶೀರ್ತ್ತ
ಮುಲೆಪತ್ತಿ
ವಾಂಗ ಕುಡಂ ನಿರೈಕ್ಕುಂ ವಳ್ಳಲ್ಪೆರುಂ
ಪಶುಕ್ಕಳ್
ನೀಂಗಾಂದ ಶೆಲ್ವಮ್ ನಿರ್ಕೆಂದು
ಏಲೋರೆಂಬಾವಾಯ್

ಈ ಪಾಶುರದಲ್ಲಿ ಭಗವಂತನ ಪರತ್ವವನ್ನು ಹಾಗೂ ತಿರುಮಂತ್ರಾರ್ಥವನ್ನು ಸೂಚಿಸಿ ಭಗವ ತ್ಕೈಂಕರ್ಯದಿಂದ ಲಭಿಸುವ ಫಲ ವಿಶೇಷವನ್ನು ತಿಳಿ ಸಲಾಗಿದೆ.

ಇದರ ತಾತ್ಪರ್ಯ :-- ಬಾನೆತ್ತರ ಬೆಳೆದು ಮೂಲೋಕವನ್ನಳೆದ ಪರಮ ಪುರುಷನ ಹೆಸರು ಹಾಡಿ ನಮ್ಮ ವ್ರತಕ್ಕಾಗಿ ನೇಮದಿಂದ ಮಿಂದರೆ ನಾಡೆಲ್ಲ ಅನಾವೃಷ್ಟಿ ದೋಷವಿಲ್ಲದೆ ತಿಂಗಳಿಗೆ ಮೂರು ಮಳೆಗಳು ಉಂಟಾಗಿ ಬೆಳೆದ ಭತ್ತದ ಪೈರುಗಳ ನಡುವೆ ಆಡುವ ಮೀನುಗಳು ವಿಕಸಿತ ಕನ್ನೈದಿಲೆ ಪೂಗಳಲ್ಲಿ ಮರಿದುಂಬಿ ನಿದ್ರಿಸಿತ್ತಿರಲು ಚಲಿಸದೆ ಕೊಟ್ಟಿಗೆಯಲಿ ನಿಂತು ಪಾಲ್‌ತುಂಬಿರುವ ಗಟ್ಟಿಸ್ತನಗಳನ್ನು ಹಿಡಿದು ಹಾಲು ಕರೆಯಲು ಕೊಡ ತುಂಬಿಸುವ ಕೊಡುಗೈ ಸಾಧು ಉತ್ತಮ ಹಸುಗಳು, ಎಂದೂ ನೀಗದ ಸಿರಿ ನೆಲಸಿ ನಾಡೆಲ್ಲ ಸಮೃದ್ಧವಾಗಿ ರುವುದು. ಇಂತಹ ನಮ್ಮ ವ್ರತ ಅದ್ವಿತೀಯ.

ಇದಕ್ಕೆ ಸ್ವಾಪದೇಶಾರ್ಥ --' ಇಲ್ಲಿ ಪರಮಾ ತ್ಮನ ವಾಮನಾವತಾರ ಮತ್ತು ತ್ರಿವಿಕ್ರಮಾವತಾರ ವರ್ಣನೆ ಆಗಿದೆ. ಭಗವಂತನ ದಿವ್ಯ ನಾಮಸ್ಮರಣೆ ಯನ್ನು ಮಾಡಿ ನೋಂಪಿಗಾಗಿ ಮಿಂದರೆ ಸುಭಿಕ್ಷ ವುಂಟಾಗುತ್ತೆ ಎಂಬುವುದಕ್ಕೆ ಅರ್ಥ -- ಭಗವದಾ ಶ್ರಯದಿಂದ ಪರಮಪುರುಷಾರ್ಥ ಹಾಗೂ ಐಹಿಕ ಸುಖವೂ ಲಭಿಸುತ್ತದೆ. ವಾಮನಾವತಾರದ ಅರ್ಥ ಆರ್ತರಕ್ಷಣಕ್ಕಾಗಿ ಅವಾಪ್ತ ಸಮಸ್ತಕಾಮನಾದರೂ ದಯಾಪರವಶನಾಗಿ ತನ್ನನ್ನೂ ಮರೆತು ಬಲಿಯ ಬಳಿ ಬಿಕ್ಷೆಬೇಡಿದನು ಭಗವಂತ. ಮಹಾಬ ಲಿಯ ಭಕ್ತಿಗೆ ಮೆಚ್ಚಿದ ಪುರುಷೋತ್ತಮನು ವಾಮನ ಮೂರ್ತಿಯ ಸಂತೋಷ ಉಕ್ಕೇರಿ ಸಂತೋಷಾಧಿಕ್ಯ ದಿಂದ ವಿಶ್ವವನ್ನೇ ಆಕ್ರಮಿಸುವಂತೆ ತ್ರಿವಿಕ್ರಮನಾದ. ಇಂದ್ರನನ್ನು ರಕ್ಷಿಸುವ ವ್ಯಾಜದಿಂದ ಸಮಸ್ತಲೋ ಕದ ಚೇತನರು ಉಜ್ಜೀಸುವಂತೆ ತನ್ನ ಚರಣಕಮಲ ಗಳ ಸೌಲಭ್ಯವನ್ನು ನೀಡಿದನು.

ನಾಲ್ಕನೆಯ ಪಾಶುರ 'ಆಳಿಮಳೈಕ್ಕಣ್ಣಾ' ಎಂಬು ವುದರಲ್ಲಿ ಭಗವಂತನ ಸೌಂದರ್ಯ ಗುಣಗಳನ್ನೂ ಆತನ ಶಂಖ, ಚಕ್ರ--ಬಿಲ್ಲು ಬಾಣಗಳನ್ನು ಹೇಳುವ ನೆಪದಲ್ಲಿ ಭಗವಂತನ ಅಂತರ್ಯಾಮಿ ಸ್ವರೂಪ ವನ್ನೂ, ಮೋಡಗಳನ್ನು ಕುರಿತು ಹೇಳುವಾಗ ಆಚಾ ರ್ಯರನ್ನು ಸೂಚಿಸುತ್ತದೆ. ಸುರಿದ ಮಳೆ ಆಚಾ ರ್ಯರ ಜ್ಞಾನಾಮೃತಕ್ಕೆ ಸಾಮ್ಯ.

ಐದನೆಯ ಪಾಶುರ "ಮಾಯನೈಮನ್ನು ವಡ ಮದುರೈ ಮೈನ್ದನೈ ತೂಯಪೆರುನೀರ್ ಯಮುನೈ ತ್ತುರೈವನೈ" ಎಂಬುವ ಪಾಶುರದ ಸ್ವಾಪದೇಶಾರ್ಥ ಪರಮಾತ್ಮನ ಸಂಸ್ಮರಣೆಯಿಂದ ಸಕಲ ಪಾಪನಾಶನ ಇಲ್ಲಿ ಉತ್ತರ ಮದುರೆಯ ಒಡೆಯ ದಾಮೋದರನ ನಾಮ ಭಗವಂತನ ಅರ್ಚಾರೂಪ.

ಆರನೆಯ ಪಾಶುರ "ಪುಳ್ಳುಂ ಶಿಲಂಬಿನಕಾಣ್" ಎಂಬುವುದರಿಂದ ಮೊದಲುಗೊಂಡ ಮುಂದಿನ ಹತ್ತು ಪಾಶುರಗಳು ಗೋದೆ ಇತರ ಗೋಪಿಯ ರನ್ನು ಎಬ್ಬಿಸುವ ಪಾಶುರಗಳು, ಈ ಹತ್ತು ಪಾಶು ರಗಳು ಆಂಡಾಳ್ ಹತ್ತು ಆಳ್ವಾರರನ್ನು ಎಬ್ಬಿಸುವ ಸುಪ್ರಭಾತ ಸ್ತೋತ್ರವಾಗಿದೆ.

6ನೆಯ ಪಾಶುರ ಪೆರಿಯಾಳ್ವಾರ್ ಸುಪ್ರಭಾತ
7ನೆಯ ಪಾಶುರ ಕುಲಶೇಖರ ಆಳ್ವಾರ್ ಸುಪ್ರಭಾತ
8ನೆಯ ಪಾಶುರ ನಮ್ಮಾಳ್ವಾರ್ ಸುಪ್ರಭಾತ
9ನೆಯ ಪಾಶುರ ತಿರುಮಳಿಶೈ ಆಳ್ವಾರ್ ಸುಪ್ರಭಾತ
10ನೆಯ ಪಾಶುರ ಪೇಯಾಳ್ವಾರ್ ಸುಪ್ರಭಾತ
11ನೆಯ ಪಾಶುರ ಭೂದತ್ತಾಳ್ವಾರ್ ಸುಪ್ರಭಾತ
12ನೆಯ ಪಾಶುರ ಪೊಯ್‌ಹೈ ಆಳ್ವಾರ್ ಸುಪ್ರಭಾತ
13ನೆಯ ಪಾಶುರ ತೊಂಡರಡಿಪ್ಪೊಡಿ ಆಳ್ವಾರ್ ಸುಪ್ರಭಾತ
14ನೆಯ ಪಾಶುರ ತಿರುಪ್ಪಾಣಾಳ್ವಾರ್ ಸುಪ್ರಭಾತ
15ನೆಯ ಪಾಶುರ ತಿರುಮಂಗೈ ಆಳ್ವಾರ್ ಸುಪ್ರಭಾತ

ಆರು ಮತ್ತು ಏಳು ಪಾಶುರಗಳಲ್ಲಿ ಬರುವ ಹಕ್ಕಿ ಗಳ ಕೂಗು ಭಗವಂತನಲ್ಲಿ ನಿರತರಾಗಿರುವ ಆಚಾ ರ್ಯರನ್ನು ಸೂಚಿಸುತ್ತದೆ. ಮುಂದಿನ ಪಾಶುರಗ ಳಲ್ಲಿ ಧರ್ಮಾನುಷ್ಠಾನ ನಿರತರಾದ ಪ್ರಪನ್ನರ ಲಕ್ಷಣ, ಭಗವತ್ ಕೈಂಕರ್ಯ ಮಗ್ನವಾದ ಅವರ ಸ್ವರೂಪ, ಆಚಾರ್ಯನನ್ನು ಆಶ್ರಯಿಸಿ ಅವನ ಮುಖಾಂತರ ಭಗವಂತನೆಡೆಗೆ ಹೋಗುವ ಸುಲಭೋಪಾಯ ಇತ್ಯಾದಿ ಪೂರ್ಣವಿವರಣೆ ಇವೆ.

16 ನೆಯ ಪಾಶುರ "ನಾಯಹನಾಯ್ ನಿನ್ರ ನಂದಗೋಪನುಡ್ಯೆಯ ಕೋಯಿಲ್ ಕಾಪ್ಪಾನೇ! ಕೊಡಿತ್ತೋನ್ರುಂ ತೋರಣ ವಾಶಲ್ ಕಾಪ್ಪಾನೇ! ಭಗವಂತನ ಅನುಭವಕ್ಕಾಗಿ ಚೇತನನು ಆಚಾರ್ಯ ರನ್ನು ಆಶ್ರಯಿಸಿ ಅವರ ಮುಖಾಂತರ ಭಗವಂತ ನಲ್ಲಿ ಶರಣಾಗತನಾಗುವುದು ಶ್ರೇಯಸ್ಕರ ಎಂಬುವು ದಾಗಿ ಈ ಪಾಶುರ ತಿಳಿಸುತ್ತೆ.

17 ನೆಯ ಪಾಶುರ "ಅಂಬರಮೇ ತಣ್ಣೀರೆ ಶೋರೆ ಅರಂಶೆಯ್ಯುಂ

18 ನೆಯ ಪಾಶುರ "ಉನ್ದುಮದಕಳಿಟ್ರನ್ ಓಡಾದ ತೋಳ್‌ವಲಿಯನ್

19 ನೆಯ ಪಾಶುರ "ಕುತ್ತು ವಿಳಕ್ಕೆರಿಯ

20 ನೆಯ ಪಾಶುರ "ಮುಪ್ಪತ್ತು ಮೂವರ್ ಅಮ ರರ್ಕ್ಳ್ ಮುನ್‌ಶೆನ್ರು.

17 ನೆಯ ಪಾಶುರವು 'ಅ' ಕಾರದಿಂದ ಪ್ರಾರಂಭ ವಾಗಿದೆ. 18, 19 'ಉ'ಕಾರದಿಂದ 20 ಮಕಾರ ದಿಂದ ಆರಂಭವಾಗಿದೆ. ಇದು ಪ್ರಣವದ ದ್ವಯ, ಚರಮ ಶ್ಲೋಕಗಳ ದ್ಯೋತಕ. ಪ್ರಣವ ಸ್ವರೂಪ ಅಕಾರ ಉಕಾರ ಮಕಾರ ಇತಿ. ಅ. ಉ. ಮ. ಓಂ ಇತಿ.

17 ನೆಯ ಪಾಶುರದಲ್ಲಿ ನಂದಗೋಪ. ಯಶೋದ, ಕೃಷ್ಣ ಬಲರಾಮರ ಸುಪ್ರಭಾತವಿದೆ. 18 ನೆಯ ಪಾಶುರ ಕೃಷ್ಣವಲ್ಲಭೆ ನಪ್ಪಿನ್ನೈಯ ಸುಪ್ರ ಭಾತ. ಪುರುಷಕಾರಳಾದ ನಪ್ಪಿನ್ನೈಯನ್ನು ಎಬ್ಬಿಸುವ ಅರ್ಥ. ಭಗವದನುಗ್ರಹಕ್ಕಾಗಿ ಪುರುಷಕಾರ ಅಗತ್ಯ ಲಕ್ಷ್ಮಿಯ ಕಟಾಕ್ಷ ಅನುಗ್ರಹ ಅವಶ್ಯಕತೆ ಸೂಚಿಸಲಾ ಗಿದೆ. ಮುಂದಿನ ಎರಡು ಪಾಶುರಗಳಲ್ಲಿ ನಪ್ಪಿ ನ್ನೈಯನ್ನು ಎಬ್ಬಿಸಿ ತಾವು ಬಂದಕಾರ್ಯದ ನೆನಪು ಕೊಡುತ್ತಾಳೆ ಗೋದೆ.

21 ನೆಯ ಪಾಶುರದಲ್ಲಿ ಶ್ರೀಕೃಷ್ಣನ ಸುಪ್ರಭಾತ ಗೋಪಿಯರ ಅನನ್ಯ ದಾಸ್ಯ ಸೂಚಿತವಾಗಿದೆ. 22 ನೆಯ ಪಾಶುರದಲ್ಲಿ ಶಿಷ್ಯರ ಅನನ್ಯಾರ್ಹ ಶೇಷತ್ವ ನಿವೇದನ, ಭಗವಂತನೇ ಉಪಾಯ ಉಪೇಯ ಎಂಬುವ ಅರ್ಥ. 23 ನೆಯ ಪಾಶುರದಲ್ಲಿ ಶ್ರೀಕೃ ಷ್ಣನ ಗಂಭೀರ ನಡೆ. 'ಗುಹೆಯಿಂದ ಹೊರಬಂದ ನರಸಿಂಗನ ದರ್ಶನಲಾಭ. 24 ನೆಯ ಪಾಶುರ 'ಅನ್ರಿ ಇವ್ವುಲಹಂ ಅಳನ್ದಾಯ್ ಇಲ್ಲಿ ಗೋದಾ ಭಗ ವಂತನ ಪಾದಕ್ಕೆ ತ್ರಿವಿಕ್ರಮನಾದವನಿಗೆ ಮಂಗಳ ಹಾಡುತ್ತಾಳೆ-- ಇವಳ ಸಾಕುತಂದೆ ಪಲ್ಲಾಂಡು ಹಾಡಿದಂತೆ.

ಸ್ವಾಪದೇಶಾರ್ಥದಲ್ಲಿ ಆಚಾರ್ಯನ ಪಾದವಂ ದನೆ. ಶ್ರೀಪಾದತೀರ್ಥಸೇವನೆ ಶಿರಸ್ಸಿಗೆ ನಮಸ್ಕಾರ ಮಾಡಿದಾಗ ಪಾವನಗೊಳಿಸಿದ ಆಚಾರ್ಯರ ಹಿರಿ ಮೆಯನ್ನು ಕೊಂಡಾಡುವ ಪಾಶುರ. ಅವರ ತಿರುವ ಡಿಗಳಿಗೆ ಮಂಗಳಾಸಾಶನ.

25 ನೆಯ ಪಾಶುರ "ಒರುತ್ತಿಮಹನಾಯ್ ಪಿರಂದ್ ಓರಿರವಿಲ್" ಗೋದೆ ಶ್ರೀಕೃಷ್ಣನ ಅವ ತಾರ ವಿಶೇಷ ವೈಭವ, ಕೊಂಡಾಡುವ ಪಾಶುರ ಶ್ರೀಕೃಷ್ಣನೇ ಉಪೇಯ ಹಾಗೂ ಉಪಾಯ ಎಂಬುವುದಾಗಿ ಗೋಪಿಯರು ಭಗವಂತನಿಗೆ ತಿಳಿಸಿ ತಮ್ಮ ಆಸೆಯನ್ನು ಪೂರೈಸಬೇಕೆಂದು ಕೊಂಡಾ ಡುವ ಪದ್ಯ. ತಿರುತ್ತಮುಂ ಶೆಲ್ವಮುಂ ಸೇವ ಹಮುಂ ಯಾಂ ಪಾಡಿ ವರುತ್ತಮುಂ ತೀರ್‌ನ್ದ್ ಮಹಿಳ್‌ನ್ದ್‌ಏಲೋರ್ ಎಂಬಾವಾಯ್--ಎಂಬು ವುದಾಗಿ ಹೇಳುವಾಗ ಲಕ್ಷ್ಮೀ ಪತಿಯನ್ನು ಕೊಂಡಾ ಡಲು ದುಃಖ ನಿವೃತ್ತಿ ಇಷ್ಟಾರ್ಥಸಿದ್ದಿ ಸಿರಿಸಂಪತ್ ವೃದ್ಧಿ.

26 ನೆಯ ಪಾಶುರ -- ಮಾಲೆ! ಮಣಿವಣ್ಣಾ, ಎಂಬುವುದರಲ್ಲಿ ಭಗವಂತನ ಸ್ವರೂಪ. ರೂಪ. ಗುಣಾದಿಗಳು ಭಕ್ತನಿಗೆ ಹೇಗೆ ಅನುಭಾವ್ಯವೋ ಅಂತೆಯೇ ಆಚಾರ್ಯನ ಸ್ವರೂಪಾದಿಗಳು ಪ್ರಪನ್ನ ನಿಗೆ ಅನುಭಾವ್ಯ. ಈ ಪಾಶುರದಲ್ಲಿ ಭಗವಂತನಿಗೆ ನಾವು ಅನನ್ಯಾರ್ಹ ಶೇಷರು ಎಂಬ ಪಾರತಂತ್ರ್ಯ ಜ್ಞಾನವನ್ನು ಭೋದಿಸುತ್ತದೆ.

27 ನೆಯ ಪಾಶುರ ಕೂಡಾರೈವೆಲ್ಲುಂ ಶೀರ್ ಗೋವಿಂದಾ!

ಇಲ್ಲಿ ಗೋವಿಂದನ ನಾಮಾಮೃತ. ಗೋ. ಗೋಪ. ಗೋಪಿಯರಿಗೆ ಅನುಕೂಲನಾದ ದೈವ, ಗೋವಿಂದಾ ನಾಮದಿಂದ ಆಳ್ವಾರಾಚಾರ್ಯರು ಗಳ ಶ್ರೀಸೂಕ್ತಿಗಳನ್ನು ಕಾಪಾಡಿಕೊಂಡು ಬಂದಿರುವ ಆಚಾರ್ಯರು, ಇಲ್ಲಿ ಭಗವತ್ ಕೈಂಕರ್ಯದ ವಿಶೇಷ, ಫಲ,ಸೂಚಿತವಾಗಿದೆ.

28 ನೆಯ ಪಾಶುರ ಕರವೈಹಳ್‌ಪಿನ್ ಶೆನ್ರ್ ಕಾನಂ ಶೇರ್‌ನ್ದುಣ್‌ಪೋಂ--

ಆಂಡಾಳ್ ಮೊದಲನೆಯ ಪಾಶುರದಲ್ಲಿ 'ನಾರಾ ಯಣನೇ ನಮಕ್ಕೆ' ಎಂದು ಹೇಳಿದ್ದ ಫಲ ಮತ್ತು ಉಪಾಯಗಳನ್ನು ಈ ಪಾಶುರದಲ್ಲಿ ವಿವರಿಸಿದ್ದಾಳೆ. ಶ್ರೀಕೃಷ್ಣನು ಕೊರತೆ ಇಲ್ಲದ ಜ್ಞಾನ ಸಂಪನ್ನನು. ಗೋಪಿಯರು ಗೊಲ್ಲರಕುಲದಲ್ಲಿ ಜನಿಸಿದ ಅಜ್ಞಾ ನಿಗಳು. ಅವರ ಉದ್ಧಾರಕ್ಕಾಗಿಯೇ ಭುವಿಯಲ್ಲಿ ಅವತರಿಸಿ ಬಂದವನು ಗೋವಿಂದನು. ಕುರೈ ಒನ್ರುಂ ಇಲ್ಲಾದ ಗೋವಿಂದ. ಇನ್ನೊಂದು ಅರ್ಥ ದಲ್ಲಿ ಜ್ಞಾನಾನುಷ್ಠಾನಗಳಲ್ಲಿ ಯಾವ ಕೊರತೆಯಿ ಲ್ಲದ ಆಚಾರ್ಯನು. ಅವನೊಡನೆ ನಂಟು ಅಳಿ ಸಲಾಗದಂತಹದು. ನಮ್ಮ ಕೈ ಹಿಡಿದು ಉದ್ಧ ರಿಸು ಎಂಬುವ ಅವರ ಆಲಾಪನೆ ಮೊರೆ ಶ್ರೇಷ್ಠವೂ ಶ್ಲಾಘ್ಯವೂ ಆಗಿದೆ.

29 ನೆಯ ಪಾಶುರ "ಶಿತ್ತಂ ಶಿರುಹಾಲೇ ವಂದುನ್ನೈ ಚ್ಚೇವಿತ್ತು"

ಇಲ್ಲಿ ಶರಣಾಗತಿಯ ಫಲ. ಭಗವಂತನಲ್ಲಿ ನಾವು ನಿಸ್ವಾರ್ಥ ಕೈಂಕರ್ಯ ಮಾಡುವುದರಿಂದ ಬಂದ ಸಂತೋಷ ಅನಂತ. ಚೇತನನಿಗೆ ಅದೇ ಪರಮ ಪುರುಷಾರ್ಥ. --ಗೋವಿಂದಾ, ಸರ್ವದೇಶ ಸರ್ವಾ ವಸ್ಥೆಗಳಲ್ಲಿ ಏಳೇಳು ಜನ್ಮಗಳಲ್ಲೂ ನಿನಗೆ ನಾವು ಅನನ್ಯಾರ್ಹ ಶಿಷ್ಯರಾಗಬೇಕು. ನಮ್ಮ ಬೇರೆ ಆಸೆ ಗಳನ್ನು ಮಾಣಿಸು. ನಾವು ಮಾಡುವ ಕೈಂಕರ್ಯ ನಮಗಾಗಿ ಅಲ್ಲ. ನಿನ್ನ ಪ್ರೀತ್ಯರ್ಥ--ಎಂಬುವ ನೈಚ್ಯಾ ನುಸಂಧಾನ ಮಂಗಳಾಶಾಸನ ಪಾಶುರ. ಮುಂದಿನ ಪಾಶುರ 'ವಂಗಕ್ಕಡಲ್ ಕಡೈಂದ ಮಾದವನ್ನೈ ಕೇಶ ವನ್ನೈ --ಎಂಬುವ ಈ ಎರಡು ಪಾಶುರಗಳು ಭಗ ವದಾರಾಧನದ ಕೊನೆಯಲ್ಲಿ ನಿತ್ಯವೂ ನಾವು ಪಾರಾ ಯಣ ಮಾಡುವ ಪದ್ಧತಿ. ಈ ಕೊನೆಯ ಪಾಶು ರವನ್ನು ಪಠಿಸುವವರಿಗೆ ಪುರುಷಾರ್ಥಸಿದ್ಧಿ ಸಂಸಾ ರದಲ್ಲಿ ಮುಳುಗಿದವರಿಗೆ ವಂಗಕ್ಕಡಲ್ ತೇಲಿಸುವ ಹಡಗು. ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿ ಸುವಂತೆ ಆಚಾರ್ಯನ ಸನ್ನಿಧಾನದಲ್ಲಿ ಶಿಷ್ಯರು ತಮ್ಮ ಇಷ್ಟಾರ್ಥವನ್ನು ಪಡೆದರು ಎಂಬುವ ಸ್ವಾಪ ದೇಶಾರ್ಥ.

]-[]-[]-[]-[]-[]-[]-[]-[]-[]-[]-[]-[]

# ನಾಮಸಂಕೀರ್ತನೆ

## -ಒಂದು ವಿಶ್ಲೇಷಣೆ

---ವಿದ್ವಾನ್ ಬ. ನ. ಗುಂಡೂರಾವ್.

ಮಾನವಲೋಕ ಬಯಸುವುದು ಶಾಂತಿ; ಆದರೆ ಪಡೆಯುವುದು ಅಶಾಂತಿ. ಇದೇಕೆ ಹೀಗೆ? ಶಾಂತಿಗಾಗಿ ಪಡುವ ಪ್ರಯತ್ನವೆಲ್ಲ ಅಶಾಂತಿಯೇನು? ಭೌತಿಕ ಸುಖ ಸಾಮಗ್ರಿಗಳಿಗೆ ಇಂದು ಕೊರತೆ ಇಲ್ಲ. ಆದರೆ ಈ ಸಾಮಗ್ರಿಗಳ ಶೇಖರಣೆಯಿಂದ ಜನಕ್ಕೆ ಶಾಂತಿ -- ಲಾಭವಾಗಿದೆಯೆಂದು ಧೈರ್ಯವಾಗಿ ಹೇಳಲು ಸಾಧ್ಯವಿಲ್ಲ. ಭೋಗ ಭಾಗ್ಯ ಸಾಮಗ್ರಿಗಳ ಸಂಚಯದಿಂದ ಬಹುಶಃ ಯಾರೂ ತೃಪ್ತಿಪಟ್ಟಿಲ್ಲ. ಸಂಸ್ಕೃತದಲ್ಲೊಂದು ಗಾದೆ ಇದೆ -- ವೃಶ್ಚಿಕ ವಿಷಭೀತಃ ಆಶೀವಿಷೇಣದಷ್ಟಃ --ಚೇಳಿನ ವಿಷಕ್ಕೆ ಭಯಪಟ್ಟವನು ಹಾವಿನಿಂದ ಕಚ್ಚಿಸಿಕೊಂಡನಂತೆ!! ವಿಷಯ ಚಾಪಲ್ಯಕ್ಕೂ ಸಹ ಈ ಮಾತು ಅನ್ವಯಿಸುತ್ತದೆ. ಭೋಗಾನುಭವದಿಂದ ಭೋಗಾಭಿಲಾಷೆ ಪರಿಸಮಾಪ್ತವಾಗಿರುವ ನಿದರ್ಶನ ಎಲ್ಲೂ ಇಲ್ಲವೆಂದು ಹಿರಿಯರ ಅಭಿಪ್ರಾಯ. ಸುಖಸಾಧನ ಸಾಮಗ್ರಿಗಳು ಬೇರೆ, ಶಾಂತಿ ಸಾಧನ ಸಾಮಗ್ರಿಗಳು ಬೇರೆ -- ಎಂಬುದು ಬಹುಮಂದಿಗೆ ಇನ್ನೂ ಸ್ಪಷ್ಟವಾಗಿಲ್ಲವೆಂದು ಎಂತಹ ಸೋಜಿಗದ ಸಂಗತಿ!!

ಮನಶ್ಶಾಂತಿ -- ನೆಮ್ಮದಿ -- ಇಲ್ಲವೆಂದಮೇಲೆ ಇನ್ನೇನಿದ್ದೇನು ಪ್ರಯೋಜನ? ಪ್ರಾಚೀನ ಶಾಸ್ತ್ರಕಾರರು ಈ ಬಗ್ಗೆ ತುಂಬ ಚಿನ್ತನೆ ನಡೆಸಿದ್ದಾರೆ. ಈ ಹೊತ್ತು ಮಾನಸಿಕ ಶಾಂತಿ -- ನೆಮ್ಮದಿ -- ಅತ್ಯಗತ್ಯ ವಸ್ತುವಾಗಿದೆ. ಋಗ್ವೇದ ಹೇಳುತ್ತದೆ -- ತಮುಷ್ಟವಾಮ ಯ ಇಮಾ ಜಜಾನ. ಯಾರು ಈ ಸಮಸ್ತವನ್ನೂ ಸೃಷ್ಟಿಸಿದ್ದಾನೆ -- ನಾವಾತನನ್ನು ಸ್ತುತಿಸೋಣ. ನಾಮ ಸಂಕೀರ್ತನೆ ಯೆಂದರೆ ದಯಾಮಯನಾದ ಭಗವಂತನನ್ನು ಕೃತಜ್ಞತಾಭಾವದಿಂದ ಸ್ತೋತ್ರಮಾಡುವುದು. ಆತನ ಅನಂತ ಕಲ್ಯಾಣ ಗುಣಗಳನ್ನು ಹಾಡಿ ಹೊಗಳುವುದು. ಆತನ ಸೌಜನ್ಯ ಸೌಂದರ್ಯ ಸೌಶೀಲ್ಯ ಸೌಲಭ್ಯಾದಿಗಳನ್ನು ಮನಸಾರೆ ಅನುಭವಿಸುವುದು.

ಸಂಕೀರ್ತನಂ ನಾಮ
ಭಗವದ್ಗುಣ ಕರ್ಮನಾಮ್ನಾಂ
ಸ್ವಯಮುಚ್ಚಾರಣಮ್

ಭಗವಂತನ ದಿವ್ಯ ನಾಮ, ದಿವ್ಯಗುಣ, ದಿವ್ಯ ಕರ್ಮಗಳನ್ನು ಸ್ವಯಂ ಉಚ್ಚರಿಸುವುದು -- ತಾನೇ ಸ್ತುತಿಸುವುದು. ಇದು "ವೀರಮಿತ್ರೋದಯ" --ಎಂಬ ಗ್ರಂಥದಲ್ಲಿರುವ ನಾಮಸಂಕೀರ್ತನ ಶಬ್ದಾರ್ಥ.

ಮುಗಿಲು ಮುಟ್ಟುವ ಪರ್ವತಗಳು ತಮ್ಮ ಮೌನ ಭಾಷೆಯಲ್ಲಿ ಹೇಳುವುದೇನು? ಉತ್ತುಂಗ ತರಂಗಮಾಲಾ ಶೋಭಿತಸಾಗರಗಳು ಹೇಳುತ್ತಿರುವುದೇನು? ಸುಕೋಮಲ ಮಂದಹಾಸ ಬೀರುವ ಬಗೆಬಗೆಯ ಹೂಗಳು ಹೇಳುತ್ತಿರುವುದೇನು? ಅತ್ಯಂತ ಎತ್ತರ ಪ್ರದೇಶಗಳಲ್ಲಿ ಸೊಂಪಾಗಿ ಬೆಳೆದು ನಿಂತಿರುವ ಭೀಮಭೂರುಹಗಳು ಹೇಳುತ್ತಿರುವುದೇನು? ಎಲ್ಲವನ್ನು ಸೃಷ್ಟಿಸಿದ ಸರ್ವಶಕ್ತನೊಬ್ಬನಿದ್ದಾನೆ -- ಎಂದು. ಜಗತ್ತನ್ನು ತಿದ್ದಬಯಸಿ -- ಜನಕ್ಕೆ ಶ್ರೇಯಃಪಥವನ್ನು ತೋರಿದ ಎಲ್ಲ ಮಹಾನ್ ವ್ಯಕ್ತಿಗಳು ತಪಸ್ಸು -- ವೇದಾಧ್ಯಯನ -- ಯಜ್ಞ -- ದಾನ -- ಮಂತ್ರ ಇವೆಲ್ಲದರ ಫಲವೇ ನಾಮಸಂಕೀರ್ತನೆ. ಗೀತೆ ಸಾರಿ ಹೇಳುತ್ತಿದೆ -- ಸತತಂ ಕೀರ್ತಯಂತೋಮಾಮ್-- ಶ್ರದ್ಧೆ ಇಲ್ಲದೆ, ದೇಕಾಬಿಟ್ಟಿಯಾಗಿಯಾದರೂ ಭಗವಂತನ ಸಂಕೀರ್ತನೆ ಮಾಡಿದರೆ -- ಆತನ ಹೆಸರು ಹೇಳಿದರೆ -- ಫಲವುಂಟು -- ಎಂಬುದಕ್ಕೆ ಈ ಶ್ಲೋಕಗಳು ಆಧಾರವಾಗಿವೆ --

ಸಾಂಕೇತ್ಯಂ ಪಾರಿಹಾಸ್ಯಂ ಚ
ಸ್ತೋಭಂ ಹೇಲನ ಮೇವ ವಾ
ವೈಕುಂಠ ನಾಮ ಗ್ರಹಣಂ
ಅಶೇಷ ಅಘಹರಂ ವಿದುಃ

---ಭಾಗವತ -- ಸ್ಕಂಧ ೬. ಅಧ್ಯಾಯ ೨. ಶ್ಲೋಕ-೧೪

ಮಧುರ ಮಧುರಮೇತತ್
ಮಂಗಳಂ ಮಂಗಳಾನಾಂ
ಸಕಲ ನಿಗಮವಲ್ಲೀ
ಸತ್‌ಫಲಂ ಚಿತ್ ಸ್ವರೂಪಂ
ಸಕೃದಪಿ ಪರಿಗೀತಂ
ಶ್ರದ್ಧಯಾ ಹೇಲಯಾ ವಾ
ಭೃಗುವರ ನರಮಾತ್ರಂ
ತಾರಯೇತ್ ಕೃಷ್ಣನಾಮ

---ಬೃಹನ್ನಾರದೀಯ -- ಪ್ರಭಾಸಖಂಡ.

ಕಾರಣಾಂತರದಿಂದ ನಾಮಸ್ಮರಣೆ ಮಾಡಿದರೂ ಧನ್ಯನಾಗುತ್ತಾನೆನ್ನುವುದಕ್ಕೆ ಸಾಕ್ಷಿಯಾಗಿದ್ದಾನೆ ಭಾಗವತದ ಅಜಾಮಿಳ. ಇವನ ಬಗ್ಗೆ ಪದ್ಮ ಪುರಾಣ ಹೇಳುತ್ತದೆ--

ಅಜಾಮಿಳೋಪಿ ಪಾಪಾತ್ಮಾ
ಯನ್ನಾಮೋಚ್ಚಾರಣಾದನು
ಪ್ರಾಪ್ತವಾನ್ ಪರಮಂ ಧಾಮ
ತಂ ವನ್ದೇ ಲೋಕಸಾಕ್ಷಿಣಮ್

ಭಗವಾನ್ ವೇದವ್ಯಾಸರು ಭಾಗವತ ಗ್ರಂಥದ ಕೊನೆಯ ಶ್ಲೋಕದಲ್ಲಿ ತಮ್ಮ -- ಅಭಿಪ್ರಾಯವನ್ನು -- ಸಂದೇಶವನ್ನು ಹೀಗೆ ಹೇಳುತ್ತಾರೆ--

ನಾಮಸಂಕೀರ್ತನಂ ಯಸ್ಯ
ಸರ್ವಪಾಪ ಪ್ರಣಾಶನಂ
ಪ್ರಣಾಮೋ ದುಃಖ ಶಮನಂ
ತಂ ನಮಾಮಿ ಹರಿಂ ಪರಮ್

ಯಾರ ನಾಮಸಂಕೀರ್ತನೆ ಸಕಲ ಪಾಪನಿವಾರಕವೋ ಯಾರನ್ನು ನಮಿಸುವುದು ಸಕಲ ದುಃಖನಿವಾರಕವೋ -- ಅಂತಹ ಪರಾತ್ಪರ ಹರಿಯನ್ನು ನಮಸ್ಕರಿಸುವುದು ಅಖಿಲ ಜಗಚ್ಛ್ರೇಯೋಮಾರ್ಗ. ಭವಸಂತಾಪನಿವಾರಣೆಗೆ ನಾಮಸಂಕೀರ್ತನೆ ಸೂಕ್ತ ಹಾಗೂ ಸುಲಭಮಾರ್ಗ.

ಆಪತ್ಸಖನೂ ಅನುಪಮದಯಾಂಬುಧಿಯೂ ಆದ ಭಗವಂತನನ್ನು ತ್ಯಾಗರಾಜರು ರಾಮ ಎಂದರು. ಪುರಂದರರು ಕೃಷ್ಣ ಎಂದರು. ಅನ್ನಮಾಚಾರ್ಯರು ತಿರುವೇಂಕಟೇಶ ಎಂದರು. ಶ್ಯಾಮಾಶಾಸ್ತ್ರಿಗಳು ಜಗನ್ಮಾತೆ ಎಂದರು. ಭಗವಾನ್ ರಾಮಕೃಷ್ಣಪರಮಹಂಸರು ಕಾಳಿಮಾತೆ ಎಂದರು. ದೇವನೊಬ್ಬ ನಾಮ ಹಲವು. ಏಕಂಸತ್ ವಿಪ್ರಾಬಹುಧಾ ವದನ್ತಿ. ಯಾರು ಯಾವ ಹೆಸರಿಂದ ದೇಕಾದರೂ ಕರೆಯಲಿ -- ಆರಾಧಿಸಲಿ -- ಭಜಿಸಲಿ. ಫಲದಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಈ ಬಗ್ಗೆ ಪ್ರಾಚೀನ ಶಾಸ್ತ್ರವಾಕ್ಯಗಳು ಅತಿಶಯೋಕ್ತಿಗಳಲ್ಲ -- ಅನುಭವ ಸತ್ಯಗಳು. ಭಗವದ್ಗೀತೆಯ ಹದಿನೇಳನೇ ಅಧ್ಯಾಯದ ಒಂದು ಶ್ಲೋಕದ ಪ್ರಕಾರ ಶ್ರದ್ಧಾರಹಿತವಾದ ಹೋಮ -- ದಾನ, ತಪಸ್ಸು ವಗೈರೆ ನಿಷ್ಫಲವಾಗುತ್ತವೆ. ಆದರೆ ಹರಿನಾಮಸಂಕೀರ್ತನೆ -- ಶ್ರದ್ಧಾರಹಿತವೇ ಆದರೂ ವಾಂಛಿತ ಫಲ ನೀಡೇ ತೀರುತ್ತದೆ. ಇನ್ನು ಶ್ರದ್ಧಾಪೂರ್ವಕವಾಗಿ ಈ ಕಾರ್ಯವಾದಾಗ ಅದರ ಫಲ ವಿಶೇಷವಾಗಿರುತ್ತದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕಲಿ

ಯುಗದಲ್ಲಿ ಹರಿನಾಮವ ನೆನೆದರೆ ಕುಲಕೋಟಿಗ ಳುದ್ಧರಿಸುವವು. ನಾಮಸಂಕೀರ್ತನೆಯಿಂದ ದೂರ ವಾಗದಂತಹ ಪಾಪಗಳೇ ಇಲ್ಲ -- ಎನ್ನುತ್ತದೆ ಸ್ಕಂದ ಪುರಾಣ. ಪಂಡಿತರಾಜ ಜಗನ್ನಾಥನ ಕಾವ್ಯಮಯ ಸಂದೇಶ ಹೀಗಿದೆ--

ವಜ್ರಂ ಪಾಪಮಹೀಭೃತಾಂ
ಭವಗ ದೋದ್ರೇಕಸ್ಯ ಸಿದ್ಧೌಷಧಂ
ಮಿಥ್ಯಾಜ್ಞಾನನಿಶಾವಿಶಾಲ ತಮಸ
ತಿಗ್ಮಾಂಶು ಬಿಂದೋದಯಃ
ಸ್ಫೂರ್ಜತ್ ಕ್ಲೇಶಮಹೀರುಹಾಂ
ಉರುತರ ಜ್ವಾಲಾಜಟಾಲಃ ಶಿಖೀ
ದ್ವಾರಂ ನಿವೃತಿ ಸದ್ಮನೋ
ವಿಜಯತೇ ಕೃಷ್ಣೇತಿ ವರ್ಣದ್ವಯಮ್

ಪಾಪಪರ್ವತಕ್ಕೆ ವಜ್ರ; ಭವರೋಗಕ್ಕೆ ಸಿದ್ಧೌಷಧಿ, ಮಿಥ್ಯಾಜ್ಞಾನವೆಂಬ ಅಂಧಕಾರವನ್ನು ದೂರ ಮಾಡುವ 'ಸೂರ್ಯ; ದುಃಖ ವೃಕ್ಷವಿನಾಶಕ್ಕೆ ದಾವಾಗ್ನಿ -- ಮೋಕ್ಷಮಂದಿರದ ಬಾಗಿಲು -- ಯಾವುದು? ಕೃಷ್ಣ -- ಎಂಬ ಎರಡಕ್ಷರದ ಮಾತು -- ಇದು ಸರ್ವಶ್ರೇಷ್ಠ.

ಯೇ ಕೀರ್ತಯಂತಿ ವರದಂ ವರಪದ್ಮನಾಭಂ
ಶಂಖಾಬ್ಜ ಚಕ್ರ ಶರ ಚಾಪ ಗದಾಸಿಹಸ್ತಮ್
ಪದ್ಮಾಲಯಾ ವದನ ಪಂಕಜ ಷಟ್ಪದಾಖ್ಯಂ
ನೂನಂ ಪ್ರಯಾಂತಿ ಸದನಂ ಮಧುಘಾತಿನಸ್ತೇ

ವಾಮನ ಪುರಾಣದ ಈ ಶ್ಲೋಕರತ್ನ ನಾಮ ಸಂಕೀರ್ತನರತನಾದವನು ವಿಷ್ಣುಲೋಕವನ್ನು ಪಡೆಯುತ್ತಾನೆಂದು ಉದ್ಘೋಷಿಸುತ್ತಿದೆ. ಆತ್ಮಜ್ಞಾನವನ್ನು ಪಡೆಯಬೇಕೆಂಬ ಇಚ್ಛೆ ಇದ್ದಲ್ಲಿ -- ಪರಮ ಪದವನ್ನು ಹೊಂದುವ ಆಸೆ ಇದ್ದಲ್ಲಿ ಗೋವಿಂದ ಸಂಕೀರ್ತನೆ ಮಾಡುವುದೇ ಸುಲಭಮಾರ್ಗ. ಭವ ಸಾಗರ ದಾಟಲು ನಾಮಸ್ಮರಣೆ -- ನಾಮ ಸಂಕೀರ್ತನೆಯೆಂಬ ಮಾರ್ಗಗಳು ಇದ್ದರೂ ಸಹ ಜನ ಭವ ಜಲಧಿ ನಿಮಜ್ಜಿತರಾಗಿ ಬಾಧೆ ಪಡುವುದನ್ನು ಕಂಡು ಜ್ಞಾನಿಗಳಾದ ಹಿರಿಯರು ತಮ್ಮ ಆಶ್ಚರ್ಯವ್ಯಕ್ತಪಡಿಸುತ್ತಾರೆ.

ಭಕ್ತಿ ಕ್ಷೇತ್ರದಲ್ಲಿ ಕಠಿನತರ ನಿಯಮಗಳಿಲ್ಲ. ಅಲ್ಲಿನ ಒಂದೇ ಒಂದು ನಿಯಮ ಶುದ್ಧಾಂತಃಕರಣ -- ಕೃತಜ್ಞತಾಭಾವ. ಜಾತಿ ಮತಗಳ -- ವಯೋಭೇದದ -- ಹೆಣ್ಣುಗಂಡೆಂಬ -- ಹಗಲು ರಾತ್ರಿಯೆಂಬ ಯಾವುದೇ ನಿಯಮಗಳಿಲ್ಲ. ವ್ಯಕ್ತಿ ಯಾವುದೇ ಕೆಲಸ ಮಾಡುತ್ತಿದ್ದರೂ ಮನಸ್ಸಿನಲ್ಲಿ ಭಗವನ್ನಾಮಸ್ಮರಣೆ ಮಾಡಲು ಅಡ್ಡಿ ಇಲ್ಲ. ಸರ್ವೇಷು ಕಾಲೇಷು ಮಾಮನುಸ್ಮರ -- ಎನ್ನುತ್ತದೆ ಗೀತಾಶಾಸ್ತ್ರ. ಮಹಾ ಪಾಪಿಯಾದವನೂ ಸಹ ಪಶ್ಚಾತ್ತಾಪಪಟ್ಟು ಭಗವಂತನಿಗೆ ಶರಣಾಗಿ ಚರಿತಾರ್ಥನಾಗಲವಕಾಶವಿದೆ. ತಿಳಿಯದೇ ಮುಟ್ಟಿದರೂ ಬೆಂಕಿಯು ಸುಡುತ್ತದೆ. ತಿಳಿಯದೇ ಹರಿನಾಮಸ್ಮರಣೆ ಮಾಡಿದರೂ ಪಾಪ ರಾಶಿ ಸುಟ್ಟುಹೋಗುತ್ತದೆ. ತಿಳಿಯದೇ ಮಾಡುವುದರಲ್ಲಿ ನಿಷ್ಫಲವೇನಿಲ್ಲ. ತಿಳಿದು ಮಾಡುವುದರಲ್ಲಿ ಅಧಿಕ ಫಲ ವುಂಟು. ಮನಸ್ಸು ವಶೀಕರಣ ಮಾಡಲು ನಾಮಸಂಕೀರ್ತನೆ ಸುಲಭ ಮಾರ್ಗ. ನಾಮಸ್ಮರಣೆಯ ರುಚಿ ಒಮ್ಮೆ ತಿಳಿಯಿತೆಂದರೆ ವ್ಯಕ್ತಿ ಅದನ್ನು ಎಂದಿಗೂ ಕೈಬಿಡುವುದಿಲ್ಲ. ಅಂತಹ ಭಕ್ತರನ್ನು ಭಗವಂತ ಎಂದಿಗೂ ಕೈಬಿಡುವುದಿಲ್ಲ.

ನ ಮೇ ಭಕ್ತಃ ಪ್ರಣಶ್ಯತಿ -- ಎಂಬುದು ಗೀತಾಚಾರ್ಯ ಜಗತ್ತಿಗೆ ಕೊಟ್ಟ ಭರವಸೆ. ಚಂಚಲವಾದದ್ದು ಮನಸ್ಸು -- ನಾಮಸ್ಮರಣೆ -- ನಾಮಸಂಕೀರ್ತನೆಗೆ ಸುಲಭವಾಗಿ ಬಗ್ಗುವುದಿಲ್ಲ -- ಎನ್ನುವುದಾದರೆ ಅದನ್ನು ಸನ್ಮಾರ್ಗಕ್ಕೆ ತಿರುಗಿಸುವ ಹೊಣೆಗಾರಿಕೆಯನ್ನೂ ಭಗವಂತನ ಮೇಲೆ ಹಾಕಿ -- ವೇದದ ಋಷಿಗಳು ಬೇಡಿಕೊಂಡಿರುವ ವಾಕ್ಯಗಳಿಂದ ಜಗತ್ತು ಪಾಠ ಕಲಿಯಬೇಕು.

ಭದ್ರಂ ನೋ ಅಪಿ ವಾತಯ ಮನಃ (ಋಗ್ವೇದ)

ಈ ಮಂತ್ರಕ್ಕೆ ಸಾಯಣಾಚಾರ್ಯರು ಭಾಷ್ಯ ಬರೆಯುತ್ತ ಅಪ್ಪಣೆ ಕೊಡಿಸಿದ್ದಾರೆ.

ತ್ವತ್ ಸಂಬಂಧಿ ಸ್ತೋತ್ರ
ಕರಣೇ ಪ್ರೇರಯೇತ್ಯರ್ಥಃ



# ಅಶ್ವತ್ಥವೃಕ್ಷ

---ವಿದ್ವಾನ್. ರಘುಸುತ.

ಪ್ರಾಚೀನ ಕಾಲದಿಂದಲೂ ವೃಕ್ಷಗಳು ಮಾನವ ಜೀವನದಲ್ಲಿ ಬಹಳ ಪ್ರಮುಖವಾದ ಸ್ಥಾನವನ್ನು ಪಡೆದಿವೆ. ಇವು ಪರಮಾತ್ಮನ ಪ್ರಾಚೀನ ನಿರ್ಮಾಣಗಳು. ಇವು ಮಾನವರಿಗೇ ಅಲ್ಲದೆ ಪ್ರಾಣಿಗಳಿಗೂ ಕೂಡ ಅಪರಿಮಿತ ಸೇವೆಯನ್ನು ಸಲ್ಲಿಸಿವೆ.

ಲೌಕಿಕ ಪ್ರಪಂಚಕ್ಕೆ ವೃಕ್ಷಗಳು ಮಾಡಿರುವ ಅಪರಿಮಿತ ಸೇವೆಯನ್ನು ದೃಷ್ಟಿಯಲ್ಲಿರಿಸಿಕೊಂಡು, ಮಾನವನು ಅನಾದಿ ಕಾಲದಿಂದಲೂ ವೃಕ್ಷಗಳು, ಸಸ್ಯಗಳು, ಪೊದೆಗಳು, ಬೇರುಗಳು, ಹಾಗೂ ಹುಲ್ಲನ್ನು ಪೂಜಿಸುತ್ತಾ ಬಂದಿದ್ದಾರೆ. ವೃಕ್ಷ ಪೂಜೆಯು ಹೆಚ್ಚು ಕಡಿಮೆ ಭೂಮಿಯ ಎಲ್ಲ ಕಡೆಗಳಲ್ಲಿಯೂ ರೂಢಿಯಲ್ಲಿದೆ.

ಬಹುಶಃ ವೃಕ್ಷ ಪೂಜೆಯು ಅತ್ಯಂತ ಪ್ರಾಚೀನವಾದುದೂ ಹಾಗೂ ಧರ್ಮದ ಪ್ರಚಲಿತ ರೂಪವಾದುದೂ ಆಗಿದೆ. ಪ್ರಮುಖವಾಗಿ ಭಾರತದ ಪುರಾಣ ಕಥೆಗಳು ಹಾಗೂ ಸಂಪ್ರದಾಯಗಳಲ್ಲಿ ವೃಕ್ಷಗಳು ಮತ್ತು ಸಸ್ಯಗಳು ಪ್ರಮುಖ ಪಾತ್ರವನ್ನು ವಹಿಸಿವೆ. ವೃಕ್ಷಪೂಜೆಯು ಪ್ರಾಚೀನ ಭಾರತದಲ್ಲಿ ಮೂಲನಿವಾಸಿಗಳ ಯುಗದಿಂದಲೂ ರೂಢಿಯಲ್ಲಿ ಇರುವುದನ್ನು ಗುರ್ತಿಸಬಹುದು. ಇದರ ಪ್ರಾಚೀನ ಕುರುಹುಗಳನ್ನು ಹರಪ್ಪ, ಮೊಹೆಂಜೊದಾರೊ ಭೂಶೋಧನೆಗಳಿಂದ ಗುರ್ತಿಸಬಹುದಾಗಿದೆ. ಅಲ್ಲಿನ ಶೋಧನೆಗಳಿಂದ ದೊರೆತ ವಿವಿಧ ಮುದ್ರೆಗಳು, ಮೂರ್ತಿಗಳಲ್ಲಿ ವಿವಿಧ ರೂಪಗಳಲ್ಲಿ ವೃಕ್ಷಭೂತಗಳ ಪ್ರಾತಿನಿಧ್ಯವಿರುವುದನ್ನು ನಾವು ಕಾಣಬಹುದಾಗಿದೆ.

ಭಾರತೀಯ ಜಾನಪದ ಹಾಗೂ ಪುರಾಣ ಸಾಹಿತ್ಯಗಳಲ್ಲಿ ಅನೇಕ ವೃಕ್ಷಗಳು ಹಾಗೂ ಸಸ್ಯಗಳನ್ನು ಅತ್ಯಂತ ಪವಿತ್ರವಾದ ಅಂಶಗಳನ್ನಾಗಿ ಪರಿಗಣಿಸಲಾಗಿದೆ. ಮೈದಾನ ಹಾಗೂ ಸಸ್ಯಗಳಿಗೆ ಸಂಬಂಧಪಟ್ಟಂತಹ ಅನೇಕ ರೀತಿಯ ಹರಕೆ, ನೋಮಿ, ವ್ರತ, ಉತ್ಸವಗಳನ್ನು ಆಚರಿಸುತ್ತಾರೆ. ಅಶ್ವತ್ಥ, ಬಿಲ್ವ, ಪಲಾಶ, ಅಶೋಕ, ಶಮೀ, ಊದುಂಬರ, ನಿಂಬೆ, ತುಳಸಿ ಇತ್ಯಾದಿ ಸಸ್ಯ ಹಾಗೂ ವೃಕ್ಷಗಳು ಭಾರತೀಯ ಪುರಾಣ ಕಥೆಗಳ ಅನೇಕ ದೇವ, ದೇವಿಯರೊಂದಿಗೆ ವಿಶೇಷ ಸಂಬಂಧವನ್ನು ಹೊಂದಿವೆ. ದೇವರುಗಳೊಂದಿಗೆ ಈ ವೃಕ್ಷಗಳು ಹೊಂದಿರುವ ಸಂಬಂಧವು ಅವುಗಳ ಉಪಯೋಗದ ಆಧಾರದ ಮೇಲೆ ರೂಪುಗೊಂಡಿವೆ. ಅಂತೆಯೇ ಅವು ಪ್ರಾಣಿ ಜಗತ್ತಿನೊಂದಿಗೆ ಹೊಂದಿರುವ ಸಂಬಂಧವನ್ನೂ ವಿವಿಧ ವಿದ್ವಾಂಸರು ವೈಜ್ಞಾನಿಕವಾಗಿ ಸಾಧಿಸಿ, ತೋರಿಸಿದ್ದಾರೆ.

ಪ್ರಮುಖವಾಗಿ ವಿಷ್ಣು ಸಹಸ್ರನಾಮದಲ್ಲಿ ಭಗವಾನ್ ವಿಷ್ಣುವು ಊದುಂಬರ, ಅಶ್ವತ್ಥ, ಅಶೋಕ, ನ್ಯಗ್ರೋಧ ಇತ್ಯಾದಿ ವೃಕ್ಷಗಳಲ್ಲಿ ಮೂರ್ತರೂಪ ಪಡೆದಿದ್ದಾನೆಂದು ವಿವರಿಸಲಾಗಿದೆ. ವಿಷ್ಣುವಿನ ಅವತಾರಗಳಲ್ಲಿ ಒಂದಾದ ಜಗನ್ನಾಥನು ಒರಿಸ್ಸಾದ ನಾಡದೇವತೆಯಾಗಿದ್ದು ನಿಂಬೆವೃಕ್ಷದೊಂದಿಗೆ ಹೆಚ್ಚಿನ ಆಂತರಿಕ ಸಂಬಂಧವನ್ನು ಹೊಂದಿದ್ದಾನೆ. ಕದಂಬ ವೃಕ್ಷವು ಶ್ರೀಕೃಷ್ಣ ಪರಮಾತ್ಮನ ಆಟದ ವೃಕ್ಷವಾಗಿದೆ. ಮಹಾವಿಷ್ಣುವಿಗೆ ತುಳಸೀದಳವು ಪ್ರೀತಿಪೂರ್ವಕವಾದುದಾಗಿದೆ.

ಬಾಳೇಹಣ್ಣು, ತೆಂಗಿನಕಾಯಿ, ಕಿತ್ತಲೆ, ಮಾವು, ದಾಳಿಂಬೆ, ದ್ರಾಕ್ಷೆ, ಸೇಬು, ಭತ್ತ, ಗೋಧಿ, ಶ್ವೇತ ಚಂದನ, ಕುಶಬೇರು, ದೂರ್ವಾಸ ಹುಲ್ಲು -- ಇತ್ಯಾದಿ ಹಣ್ಣುಗಳು. ಬೇರು, ಹುಲ್ಲುಗಳನ್ನು ಮಹಾವಿಷ್ಣುವಿನ ಪೂಜೆಯಲ್ಲಿ ಉಪಯೋಗಿಸುತ್ತೇವೆ.

ಇದೇ ರೀತಿಯಲ್ಲಿ ಅಶ್ವತ್ಥವು ಶ್ರೀಮಹಾವಿಷ್ಣುವಿನ ಮೂರ್ತರೂಪ ವೃಕ್ಷವಾಗಿದೆಯೆಂದು ಹೇಳಲಾಗುತ್ತದೆ. ಭಗವದ್ಗೀತೆಯಲ್ಲಿ ಮಹಾವಿಷ್ಣುವೇ ಅಶ್ವತ್ಥ ವೃಕ್ಷದ ರೂಪವನ್ನು ಪಡೆದಿರುವನೆಂದು ತಿಳಿಸಲಾಗಿದೆ.

ಅಶ್ವತ್ಥಃ ಸರ್ವವೃಕ್ಷಾಣಾಂ
ದೇವರ್ಷೀಣಾಂ ಚ ನಾರದಃ
ಗಂಧರ್ವಾಣಾಂ ಚಿತ್ರರಥಃ
ಸಿದ್ಧಾನಾಂ ಕಪಿಲೋ ಮುನಿಃ
(ಭಗವದ್ಗೀತೆ -- ೧೦.೨೬)

ಪದ್ಮಪುರಾಣ (೬.೮೧.೪೨), ಭವಿಷ್ಯಪುರಾಣ -- ಉತ್ತರಪರ್ವ (೧.೭.೨.೨೩), ನಾರದೀಯ ಪುರಾಣ -- ಉತ್ತರ ಖಂಡ (೫೨.೧೮) ಇತ್ಯಾದಿ ಪುರಾಣಗಳು ಇಂತಹ ಭಾವನೆಗಳಿಗೆ ಪುಷ್ಟಿ ನೀಡಿವೆ.

ಮಹಾಭಾರತದಲ್ಲಿ ಅಶ್ವತ್ಥ ವೃಕ್ಷವನ್ನು ಸೂರ್ಯ, ವಿಷ್ಣು, ಶಿವ -- ಇತ್ಯಾದಿ ದೇವರುಗಳೊಂದಿಗೆ ದೈವೀಕರಿಸಲಾಗಿದೆ, ಆ ದೇವರುಗಳೇ ಆ ವೃಕ್ಷಗಳು ಎಂದು ಪರಿಗಣಿಸಲಾಗಿದೆ.

ಸ್ಕಂದಪುರಾಣ (೨೪೭.೪೧.೪೨ ಮತ್ತು ೪೪) ದಲ್ಲಿ ಅಶ್ವತ್ಥವನ್ನು 'ವಿಷ್ಣು ವೃಕ್ಷ' ಎಂದು ಕರೆಯಲಾಗಿದೆ. ಏಕೆಂದರೆ ಈ ವೃಕ್ಷದ ಪ್ರತಿಯೊಂದು ಭಾಗವನ್ನೂ ವಿಷ್ಣುವಿನ ಬೇರೆ ಬೇರೆ ಹೆಸರುಗಳೊಂದಿಗೆ ಸಮೀಕರಿಸಲಾಗಿದೆ.

ಪದ್ಮಪುರಾಣದಲ್ಲಿ (೬.೧೧೫.೨೫ -- ೨೯) ಅಶ್ವತ್ಥ ವೃಕ್ಷದ ಸೃಷ್ಟಿಯ ಬಗೆಗೆ ಸುಂದರವಾದೊಂದು ಕಥೆಯಿದೆ. ಇದನ್ನು ಭಗವಾನ್ ವಿಷ್ಣುವಿನ ಪ್ರಕಟಣೆಯೆಂದೇ ಹೇಳಲಾಗುತ್ತಿದೆ.

ಶಿವ, ಪಾರ್ವತಿಯರ ವಿವಾಹಾನಂತರ, ಅವರು ಒಂದು ಏಕಾಂತಸ್ಥಳದಲ್ಲಿ ಶೃಂಗಾರ ಕ್ರೀಡೆಯಲ್ಲಿ ತಲ್ಲೀನರಾಗಿದ್ದರು. ಈ ಸಂಯೋಗದಿಂದ ಭಯಾನಕ ಪರಿಣಾಮವಾಗುವುದೆಂದು ದೇವತೆಗಳು ಭಯಪಟ್ಟರು. ಇದಕ್ಕಾಗಿ ಇವರಿಬ್ಬರ ಸಮಾಗಮವನ್ನು ತಡೆಯಲು ಅಗ್ನಿಯನ್ನು ಕಳುಹಿಸಲಾಯಿತು. ಅಗ್ನಿಯು ಬ್ರಾಹ್ಮಣ ವೇಷವನ್ನು ಧರಿಸಿ, ಆ ಏಕಾಂತಸ್ಥಳವನ್ನು ಪ್ರವೇಶಿಸಿದನು. ಸಮಾಗಮದ ಸನ್ನಿವೇಶದಲ್ಲಿ ಈ ರೀತಿಯ ಬೇರೆಯವರ ಪ್ರವೇಶದಿಂದ ಪಾರ್ವತಿಯು ಸಿಟ್ಟಿಗೆದ್ದಳು. ತನಗೆ (ತಮಗೆ) ವ್ಯತಿರೇಕವಾಗಿ ಪಿತೂರಿ ಮಾಡಿದ ದೇವತೆಗಳ ಬಗ್ಗೆ ಆಕೆ ತುಂಬಾ ಕೋಪಗೊಂಡು ಅವರಿಗೆ ಶಾಪವನ್ನು ನೀಡಿದಳು. ಪಾರ್ವತಿಯ ಈ ಶಾಪದಿಂದ ಬ್ರಹ್ಮನು ಪಲಾಶವೃಕ್ಷವಾಗಿ, ವಿಷ್ಣುವು ಅಶ್ವತ್ಥವೃಕ್ಷವಾಗಿ, ಮಹೇಶ್ವರನು ವಟವೃಕ್ಷವಾಗಿ ರೂಪಾಂತರಗೊಂಡರು. ಇವರೆಲ್ಲ ದೇವತೆಗಳೊಂದಿಗೆ ಒಟ್ಟಿಗೆ ಸೇರಿ, ಪಿತೂರಿ ಮಾಡಲು ನಾಯಕತ್ವ ವಹಿಸಿದ್ದರೆಂಬ ಅನುಮಾನ ಪಾರ್ವತಿಗೆ ಉಂಟಾಗಿತ್ತು. ಈ ರೀತಿ ವಿಷ್ಣುವು ಅಶ್ವತ್ಥ ವೃಕ್ಷವಾದ.

ಇತರೇ ಗ್ರಂಥಗಳಲ್ಲಿ ಬೇರೆ ಕಥೆಯ ರೂಪಾಂತರವಿದೆ. ರಾಕ್ಷಸ ರಾಜನೂ ಬೃಂದಾಳ ಪತಿಯೂ ಆದ ಜಲಂಧರನ ಚಿತಾಭಸ್ಮದಿಂದ ತುಳಸಿ, ಧಾತ್ರಿ, ಪಲಾಶ, ಅಶ್ವತ್ಥ ವೃಕ್ಷಗಳು ಸೃಷ್ಟಿಯಾಗಿ, ಸಂಬಂಧಪಟ್ಟ ದೇವತೆಗಳಿಗೆ ಅರ್ಪಿತವಾದುವು ಎನ್ನಲಾಗಿದೆ.

ವಿಷ್ಣುವು ನಾರದನೊಂದಿಗೆ ಸಂಭಾಷಿಸುತ್ತ ತಾನು ಅಶ್ವತ್ಥ ವೃಕ್ಷದ ಮೂಲ (ಬೇರುಗಳಲ್ಲಿ)ದಲ್ಲಿ ಇರುವುದಾಗಿ ತಿಳಿಸಿ, ಯಾರು ಈ ವೃಕ್ಷವನ್ನು ಆರಾಧಿಸುವರೊ ಅವರಿಗೆ ಯಮ ಲೋಕದ ದರ್ಶನವಿಲ್ಲ ಎಂದು ತಿಳಿಸಿದ್ದಾನೆ. ಇದನ್ನು ವಾಮನ ಪುರಾಣದ ಸಾರೋ ಮಾಹಾತ್ಮ್ಯ(೧೩೮) ಶ್ಲೋಕದಲ್ಲಿ ತಿಳಿಸಲಾಗಿದೆ.

ಕೃಷ್ಣನು ತನ್ನ ಅವತಾರ ಪೂರೈಸುವ ಸಮಯದಲ್ಲಿ ಅಶ್ವತ್ಥ ವೃಕ್ಷದ ಕೆಳಗೆ ಕುಳಿತು ತಪಸ್ಸು ಮಾಡಿದನೆಂದು ಹೇಳಲಾಗಿದೆ. ತನ್ನ ಮಾಯೆಯನ್ನು ತಾನೇ

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಹನ್ನೆರಡು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ./ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ.
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಕಳುಹಿಸಿ ತಮ್ಮ ಸದಸತ್ಯ ಸಂಖ್ಯೆಯನ್ನು ಪುನರುದ್ಧರಿಸಿಕೊಳ್ಳಿರಿ.
* ತಮ್ಮ ವಿಳಾಸ ಬದಲಾದಾಗ, ಚಂದಾ ಹಣ ಪುನಃ ಕಳುಹಿಸುವಾಗ ಸಪ್ತಗಿರಿಗೆ ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**

ಎತ್ತಿ ಹಿಡಿಯುವವನಂತೆ, ಇತರರನ್ನು ಮೂರ್ಖರನ್ನಾಗಿಸುವ ಸಾಮರ್ಥ್ಯವುಳ್ಳ ಶ್ರೀಕೃಷ್ಣನು ಸರಸ್ವತಿ ನದಿಯ ನೀರನ್ನು ಸೇವಿಸಿ, ಅಶ್ವತ್ಥ ವೃಕ್ಷದ ಕೆಳಗೆ ಮಲಗಿದ ಭಂಗಿಯಲ್ಲಿ ಕುಳಿತು ತನ್ನ ಬಲಪದಪ್ಮಾದವನ್ನು ಎಡ ತೊಡೆಯ ಮೇಲೆ ಇರಿಸಿಕೊಂಡು ಆ ಅಶ್ವತ್ಥ ವೃಕ್ಷದ ಮೇಲೆ ಹಾಗೆಯೇ ಒರಗಿದ. ಅವತಾರ ಪರಿಸಮಾಪ್ತಿಯಾಗುವ ಸಮಯ ಬಂದರೂ ಕೂಡ ಚಿರಸಂತಸದಿಂದಲೇ ಇದ್ದ. ಮುಂದಿನ ಕೃಷ್ಣಾವತಾರ ಸಮಾಪ್ತಿ ಎಲ್ಲರಿಗೂ ತಿಳಿದಿರುವುದೇನೇ!

ಏಷ್ಯಾದ ಬೆಳಕಾದ ಹಿಂದೂ ಧರ್ಮದ ವಿಷ್ಣುವಿನ ಹತ್ತು ಅವತಾರಗಳಲ್ಲಿ ಒಂದಾದ ಭಗವಾನ್ ಬುದ್ಧನು ಪ್ರತಿ ಅಂಶದಲ್ಲಿಯೂ ಅಶ್ವತ್ಥ ವೃಕ್ಷದೊಂದಿಗೆ ಒಂದಾಗಿರುವವನು. ಅದರಿಂದಲೇ ಪ್ರಪಂಚದಲ್ಲಿನ ಪ್ರತಿಯೊಬ್ಬ ಬೌದ್ಧಮತೀಯನೂ ಭಕ್ತಿ, ಗೌರವಗಳಿಂದ ಅರಳೀಮರವನ್ನು ಪೂಜಿಸುವನು.

ಪ್ರಾಚೀನ ಭಾರತೀಯ ಇತಿಹಾಸದ ಕವಿಗಳು ಅರಳೀಮರ ಮತ್ತದರ ವಿಭಾಗಗಳನ್ನು ಕಾವ್ಯಾತ್ಮಕವಾಗಿ ವಿವರಿಸಿದ್ದಾರೆ. ಆ ವೃಕ್ಷದ ಎಲೆಯು ಭಗವಾನ್ ವಿಷ್ಣುವಿನ ಮುಂದಿನ ದೇಹಭಾಗವನ್ನು ಹೋಲುತ್ತಿದೆ ಎನ್ನುತ್ತಾರೆ. ಅಂತೆಯೇ ವಿಷ್ಣುವಿನ ಕೈಗಳು ತುಟಿಗಳ ಬಣ್ಣವು ಅರಳೀಮರದ ಎಳಸಾದ ಎಲೆಗಳಂತಿವೆಯಂತೆ.

ಆದುದರಿಂದ ಈ ವೃಕ್ಷವನ್ನು 'ಪ್ರಪಂಚದ ವೃಕ್ಷ' (ಸಂಸಾರ ವೃಕ್ಷ) ಎಂದು ಕರೆಯುತ್ತಾರೆ. ಇದನ್ನು ಆತ್ಮದ ವೃಕ್ಷ ಹಾಗೂ ಜ್ಞಾನ ವೃಕ್ಷ ಎಂದೂ ಕರೆಯುತ್ತಾರೆ. ಅದರಿಂದಲೇ ಹಿಂದಿನ ಕಾಲದಲ್ಲಿ ಋಷಿಗಳು, ಸಂತರುಗಳು ಕೊಡೆಯಂತೆ ಹರಡಿರುವ, ತಂಗಾಳಿ ಬೀಸುವ, ಆರೋಗ್ಯಕರ ಅರಳೀಮರದ ಕೆಳಗೆ ತಪಸ್ಸು ಮಾಡಲು ಇಷ್ಟಪಡುತ್ತಿದ್ದರು. ಅಲ್ಲದೆ ಈ ವೃಕ್ಷವನ್ನು ತಾಂತ್ರಿಕ ಮೌಲ್ಯಗಳಿಂದ ಕೂಡಿದ ಹಾಗೂ ವೈದ್ಯಕೀಯ ಸತ್ವಗಳಿಂದ ಕೂಡಿದ ಅಮೂಲ್ಯ ವೃಕ್ಷವೆಂದು ಭಾವಿಸಲಾಗಿದೆ. ಅದರಿಂದ ಭಾರತೀಯರು ಇದನ್ನು ವಿಷ್ಣುವಿನ ರೂಪಾಂತರವೆಂದು ಗೌರವಿಸಿರುವುದು.

ವಿಷ್ಣುವನ್ನು ಜ್ಞಾನಭಾಂಡ ಎಂದು ಕರೆಯುವರು. ಅದರಿಂದಲೇ ಗೋವಿಂದ ಎನ್ನುವ ಹೆಸರು ಆತನಿಗೆ ಅಂತೆಯೇ ಅಶ್ವತ್ಥ ವೃಕ್ಷವನ್ನು 'ಜ್ಞಾನಭಂಡಾರ' ಎಂದು ಕರೆಯುವರು.

ಅರಳೀಮರವು ಬಹಳ ಪವಿತ್ರವಾದುದೆಂದೂ ಲಕ್ಷ್ಮೀ ಅಲಕ್ಷ್ಮೀ ಶನಿ, ಸೂರ್ಯ, ಮನಸಾ, ತ್ರಿಮೂ

ಗಳು ಇತ್ಯಾದಿ ದೇವ ದೇವತೆಗಳು ನೆಲೆಸಿರುವ ಮೂಲ್ಯ ವೃಕ್ಷವೆಂದೂ ಹೇಳಲಾಗುತ್ತದೆ.

ಕೆಳಗಿನ ಶ್ಲೋಕವು ಈ ಅರ್ಥವನ್ನು ಸಾರ್ಥಕಗೊ ಸುತ್ತದೆ--

ಮೂಲೇ ವಿಷ್ಣುಃ ಸ್ಥಿತೋ ನಿತ್ಯಂ
ಸ್ಕಂಧೇ ಕೇಶವ ಏವ ಚ
ನಾರಾಯಣಸ್ತು ಶಾಖಾಸು
ಪತ್ರೇಷು ಭಗವಾನ್ ಹರಿಃ

ಫಲೇಽಚ್ಯುತೋ ನ ಸಂದೇಹಃ
ಸರ್ವದೇವೈಃ ಸಮನ್ವಿತಃ
ಸ ಏವ ವಿಷ್ಣುರ್ದ್ರುಮ ಏವ ಮೂರ್ತೋ
ಮಹಾತ್ಮಭಿಃ ಸೇವಿತ ಪುಣ್ಯಮೂಲಃ
ಯಸ್ಯಾಶ್ರಯಃ ಪಾಪಸಹಸ್ರಹಂತಾ
ಭವೇನ್ನೃಣಾಂ ಕಾಮದುಘೋ ಗುಣಾಢ್ಯಃ
(ಸ್ಕಂದ ಪುರಾಣ, ನಾಗರಖಂಡ
೨೪೭/೪೧, ೪೨, ೪೪)

ಅಶ್ವತ್ಥ ವೃಕ್ಷದ ಬೇರುಗಳಲ್ಲಿ ವಿಷ್ಣುವು ನೆಲೆಸಿ ರುವನು. ಕಾಂಡದಲ್ಲಿ ಕೇಶವನೂ, ಕೊಂಬೆಗಳಲ್ಲಿ ನಾರಾಯಣನೂ ನೆಲೆಸಿರುವರು. ಎಲೆಗಳಲ್ಲಿ ಭಗ ವಾನ್ ಹರಿಯೂ, ಹಣ್ಣುಗಳಲ್ಲಿ ಇತರೇ ದೇವರು ಗಳೊಂದಿಗೆ ಅಚ್ಯುತನು ಸಂಸ್ಥಾಪಿತನಾಗಿರುವನು. ಇದರಲ್ಲಿ ಯಾವುದೇ ಅನುಮಾನವೂ ಇಲ್ಲ. ಸ್ವತಃ ವಿಷ್ಣುವೇ ಸಾಕಾರನಾಗಿ ಈ ವೃಕ್ಷರೂಪವನ್ನು ಪಡೆ ದಿರುವನು. ಘನತೆವೆತ್ತ ಆತ್ಮಗಳು ಈ ವೃಕ್ಷದ ಬೇರುಗಳನ್ನು ಪೂಜಿಸುತ್ತವೆ. ಈ ವೃಕ್ಷದ ಮೇಲೆ ಆಧಾರ ಪಟ್ಟಿರುವ ಮಾನವರ ನೂರಾರು ಪಾಪ ಗಳು ನಿರ್ನಾಮವಾಗುವುವು. ಅವರ ಪ್ರಾರ್ಥನೆಗಳು ಮಾನ್ಯಮಾಡಲ್ಪಡುವುವು -- ಎಂಬುದು ಈ ಶ್ಲೋಕ ಗಳ ಅರ್ಥ.

ಅಶ್ವತ್ಥ ಎನ್ನುವ ರಾಕ್ಷಸನೊಬ್ಬ ನಿದ್ದನಂತೆ. ಪಿಪ್ಪ ಲನು ಇವನ ತಮ್ಮ. ಇವರಿಬ್ಬರೂ ವೃಕ್ಷಗಳ ರೂಪವನ್ನು ಧರಿಸಿ, ತಮ್ಮ ನೆಲಳಿನಲ್ಲಿ ಬಂದವ ರನ್ನೆಲ್ಲ ನುಂಗುತ್ತಿದ್ದರು. ಇದನ್ನು ಅರಿತ ಬ್ರಾಹ್ಮ ಣರೆಲ್ಲರೂ ಈ ವೃಕ್ಷಗಳಿಂದ ತಮ್ಮನ್ನು ರಕ್ಷಿಸು ವಂತೆ ಸೂರ್ಯ ಪುತ್ರನಾದ ಶನೇಶ್ವರನನ್ನು ಪ್ರಾರ್ಥಿ ಸಿದರು. ಆ ಶನಿಯು ಆ ಬ್ರಾಹ್ಮಣರ ತಪಶ್ಶಕ್ತಿ ಯನ್ನೆಲ್ಲ ತಾನೇ ಸ್ವೀಕರಿಸಿ, ರಾಕ್ಷಸರ ವೃಕ್ಷರೂಪ ಗಳ ನೆರಳಿನಲ್ಲೆ ಇದ್ದು, ಅವರಿಬ್ಬರನ್ನೂ ಸಂಹರಿಸಿದ. ಅಶ್ವತ್ಥ ರಾಕ್ಷಸನು ತಾನು ವೃಕ್ಷರೂಪದಲ್ಲೆ ಶಾಶ್ವ ತವಾಗಿರುವಂತೆ ವರ ಕರುಣಿಸಬೇಕೆಂದು ಬೇಡಿ ದಾಗ, ಶನಿಯು ಅದು ಮಹಾವಿಷ್ಣುವಿನ ಕಾರ್ಯ ವೆಂದು ತಿಳಿಸಿದ. ಅಂತೆಯೇ ಆ ರಾಕ್ಷಸ ಆತ್ಮವು ಮಹಾವಿಷ್ಣುವನ್ನು ಬೇಡಲಾಗಿ, ವಿಷ್ಣುವು ಆ ವೃಕ್ಷ ದಲ್ಲಿ ನೆಲೆಸಿ, ಸರ್ವವಂದ್ಯನಾದ.

ಶ್ರೀ ಮಹಾವಿಷ್ಣುವೇ ಅಶ್ವತ್ಥ. ವಿಷ್ಣುವನ್ನು ಕಾಣಲು ಸಾಧ್ಯವಿಲ್ಲದಿರುವುದರಿಂದ ಅಶ್ವತ್ಥ ವೃಕ್ಷ ವನ್ನೇ ವಿಷ್ಣುವೆಂದು ಭಾವಿಸಿ ಪೂಜಿಸಬೇಕೆಂದು ಸ್ಕಂದಪುರಾಣ (II. ೪.೩.೩೮ a ಮತ್ತು c) ತಿಳಿ ಸುತ್ತದೆ. ಅದರಲ್ಲೂ ಕಾರ್ತೀಕ ಮಾಸದಲ್ಲಿ ಈ ವೃಕ್ಷವನ್ನು ಪೂಜಿಸುವುದು ತುಂಬಾ ಶ್ರೇಷ್ಠವಾದುದು ಎಂದು ಹೇಳಲಾಗುತ್ತದೆ. ವಿಷ್ಣುವೇ ಸೂರ್ಯ ನಾಗಿರುವುದರಿಂದ, ಸೂರ್ಯನ ಪೂಜೆ ಮಾಡಲು ಅಶ್ವತ್ಥ ಪೂಜೆ ಅವಶ್ಯಕ ಎಂದು ಬ್ರಾಹ್ಮಣ್ಯದ ಶಾಸ್ತ್ರವಿ ಧಿಯ ಪರಂಪರೆ ತಿಳಿಸುತ್ತದೆ. ಲಲಿತಾ ಸ್ತೋತ್ರ, ಪೂಜೆ, ಸಹಸ್ರ ನಾಮ ವಿಧಿಗಳನ್ನು ನೆರವೇರಿಸುವು ದಕ್ಕೆ ಮುಂಚೆ ಅಶ್ವತ್ಥ ಮರದ ಎಲೆಯನ್ನು ದರ್ವಿ (ಉದ್ಧರಣೆ) ಆಕಾರ ಮಾಡಿ, ಅದರಲ್ಲಿ ಸೂರ್ಯ ನಿಗೆ ಪ್ರಸಾದವನ್ನು ಅರ್ಪಿಸಿ ನಂತರ ವಿಧಿಗಳನ್ನು ಮುಂದುವರಿಸಬೇಕೆಂದು ಹೇಳಿದೆ. ಪದ್ಮಪುರಾಣ ದಲ್ಲಿನ (ಸೃಷ್ಟಿಖಂಡ ೫೫.೧೬) ಒಂದು ಮಂತ್ರವು ಬೋಧಿಸತ್ವವನ್ನು ಗುರ್ತಿಸುವ ವಿಷ್ಣುವಿನ ಅವಾಸ ಸ್ಥಾನ ಎಂದು ತಿಳಿಸುತ್ತದೆ. ಇಲ್ಲಿ ತಿಳಿಸಿರುವ ಬೋಧಿ ಸತ್ವವು ಬುದ್ಧನು ವಿಷ್ಣುವಿನ ಅವತಾರ ಎನ್ನುವ ನಂಬಿ ಕೆಯ ಪ್ರಭಾವವನ್ನು ಪ್ರತಿಪಾದಿಸುತ್ತದೆ. ಬೋಧಿ ಸತ್ವನು ಬುದ್ಧನಿಗಿಂತ ಸ್ವಲ್ಪ ಕಡಿಮೆ ಎನ್ನಿಸಿದರೂ ಆಧ್ಯಾತ್ಮಿಕವಾಗಿ ಹಾಗೂ ಧಾರ್ಮಿಕವಾಗಿ ಇಬ್ಬರೂ ಸಮಾನ ಎಂದೇ ನಂಬಲಾಗಿದೆ. ಪ್ರಾಚೀನ ಕಾಲ ದಲ್ಲಿ ರಾಕ್ಷಸರು ದೇವರು, ದೇವತೆಗಳನ್ನು ಸೋಲಿಸಿ ದಾಗ ಅವರು ತಮ್ಮ ರಕ್ಷಣೆಗಾಗಿ ವೃಕ್ಷಗಳನ್ನು ಆಶ್ರ ಯಿಸುತ್ತಿದ್ದರು. ಅಂತಹ ಸಮಯಗಳಲ್ಲಿ ವಿಷ್ಣುವು ಅಶ್ವತ್ಥ ವೃಕ್ಷದ ಆಶ್ರಯ ಪಡೆದನು.

ಅರಳೀ ಮರಕ್ಕೆ ಸಂಸ್ಕೃತದಲ್ಲಿ ಅಶ್ವತ್ಥ ಅಥವಾ ಪಿಪ್ಪಲ ವೃಕ್ಷ ಎಂಬ ಹೆಸರುಗಳಿವೆ. ಇದರ ಉಗ ಮಸ್ಥಾನ ಭಾರತ. ಇಲ್ಲಿಂದ ಬೇರೆ ದೇಶಗಳಿಗೆ ರವಾ ನೆಯಾಗಿದೆ. ಇವು ಶತಶತಮಾನಗಳು ಬದುಕು ತ್ತಿವೆ. ಕ್ರಿ.ಪೂ. ೨೮೮ ರಲ್ಲಿ ನೆಟ್ಟ ಒಂದು ಮರ ಸಿಲೋನಿನಲ್ಲಿ ಇನ್ನೂ ಜೀವಂತನಾಗಿದೆ. ಕರ್ನಾ ಟಕದ ಗೌರಿಬಿದನೂರು ಬಳಿಯಲ್ಲಿನ ವಿದುರಾಶ್ವ ತ್ಥದಲ್ಲಿನ ಮರ ಬಹಳ ಹಳೆಯದು.

ಇದರ ಎಳೆಯ ಎಲೆ ತಾಮ್ರವರ್ಣದ್ದಾಗಿರು ತ್ತದೆ. ಇದು ಬಲಿತ ಎಲೆ ಹಸಿರು ಬಣ್ಣದ್ದಾಗಿರು ತ್ತದೆ. ಮೊದಲು ಅತಿ ಸಣ್ಣದಾಗಿ ನಂತರ ಪ್ರತ್ಯೇಕ ಮರವಾಗಿ ವಿಶಾಲವಾಗಿ ಹರಡಿರುವ ಕೊಂಬೆ ಗಳನ್ನು ಹೊಂದಿರುತ್ತದೆ. ಇದು ನಿತ್ಯಹರಿದ್ವ ರ್ಣದ ಮರ. ಬುದ್ಧಗಯಾದಲ್ಲಿರುವ ಅರಳೀಮ ರವು ಒಂದು ಪ್ರಸಿದ್ಧವಾದ ಅರಳೀಮರವಾಗಿದೆ. ಆದುದರಿಂದ ಇಲ್ಲಿನ ಮರವು ಹಿಂದು, ಬೌದ್ಧರು -- ಇಬ್ಬರಿಗೂ ಪವಿತ್ರ. ಇದು ೧೦೦ ಅಡಿಗಳಿಗಿಂತಲೂ ಹೆಚ್ಚು ಎತ್ತರ ಬೆಳೆಯಬಲ್ಲವು.

ಅರಳೀಮರವು ಸರ್ವದೇವಾತ್ಮಕವಾಗಿದ್ದು, ವೃಕ್ಷ ರಾಜನೆನಿಸಿಕೊಂಡಿದೆ. ಆದುದರಿಂದ, ಈ ಮರ ವನ್ನು ಸಾಮಾನ್ಯವಾಗಿ ದೇವಾಲಯಗಳಲ್ಲಿ ಬೆಳೆಸು ತ್ತಾರೆ. ಇದನ್ನು ಸಾಲುಮರಗಳಾಗಿ ಬೆಳೆಸುವುದೂ ರೂಢಿಯಲ್ಲಿದೆ. ಅರಳೀಮರ, ಬೇವಿನಮರ, ನಾಗ ರಕಲ್ಲು -- ಇದು ಎಲ್ಲೆಡೆ ಸಾಮಾನ್ಯವಾಗಿ ಕಂಡುಬ ರುವ ದೃಶ್ಯ.

ಈ ಮರ ಬಹಳ ಗಟ್ಟಿಯಾಗಿದ್ದು ಮಳೆ, ಗಾಳಿ ಗಳಿಗೆ ಬೀಳುವುದಿಲ್ಲ. ಇದು ಬೇಕಾದಷ್ಟು ನೆರಳು ಕೊಡುತ್ತದೆ. ಈ ವಿಶಾಲ ಮರದಲ್ಲಿ ಸಾವಿರಾರು ಪಕ್ಷಿಗಳು ಆಶ್ರಯ ಪಡೆಯುತ್ತವೆ. ಹುಲ್ಲಿಗಿಂತಲೂ ಮೂರು ಪಾಲು ಹೆಚ್ಚು ಪ್ರೋಟೀನ್ ಅಂಶವಿರುವ ಇದರ ಎಲೆಗಳು ದನಕರುಗಳಿಗೆ ಹಾಗೂ ಆನೆ ಗಳಿಗೆ ಒಳ್ಳೆಯ ಮೇವು. ಈ ವೃಕ್ಷದ ಹಣ್ಣುಗ ಳನ್ನು ಹಕ್ಕಿಗಳು ತಿನ್ನುತ್ತವೆ. ಇದರ ತೊಗಟೆಯಿಂದ ಟ್ಯಾನಿನ್ ತಯಾರಿಸುತ್ತಾರೆ. ಇದರಿಂದ ಲೇಟೆಕ್ಸ್ ದೊರೆಯುತ್ತದೆ. ಇದರ ಎಲೆಗಳನ್ನು ಅಸ್ಸಾಂ ನಲ್ಲಿ ಒಂದು ಬಗೆಯ ರೇಷ್ಮೆ ಹುಳುಗಳಿಗೆ ತಿನ್ನಿಸು ತ್ತಾರೆ. ಮರದ ರಂಧ್ರಗಳನ್ನು ಮುಚ್ಚಲು, ಆಭರಣ ಮಾಡಲು ಇದರ ಅರಗನ್ನು ಉಪಯೋಗಿಸುತ್ತಾರೆ. ಈ ಮರದ ಹಲಗೆಗಳನ್ನು ಪೆಟ್ಟಿಗೆ, ಬೆಂಕಿ ಪೊಟ್ಟಣ ತಯಾರಿಕೆಗೆ ಉಪಯೋಗಿಸುತ್ತಾರೆ.

ಈ ವೃಕ್ಷದ ಅಂಶಗಳನ್ನು ಔಷಧವನ್ನಾಗಿಯೂ ಉಪಯೋಗಿಸುವರು. ಇದರ ಚಿಗುರು ವಿರೇ ಚಕವಾದುದು. ಇದರ ತೊಗಟೆಯಿಂದ ಬಾಯಿ ಹುಣ್ಣು, ಆಮಶಂಕೆ, ಮೇಹರೋಗಗಳಿಗೆ ಔಷಧ ವನ್ನು ತಯಾರಿಸುವರು. ಇದರ ಎಲೆಯ ಬೂದಿ ಯನ್ನು ಎಣ್ಣೆಯೊಂದಿಗೆ ಮಿಶ್ರಮಾಡಿ ಸುಟ್ಟಗಾಯಕ್ಕೆ ಲೇಪಿಸುತ್ತಾರೆ.

ಈ ವೃಕ್ಷವು ಬೆಳೆಯುವುದು ನಿಧಾನವಾದರೂ ಅನೇಕ ರೀತಿಯಲ್ಲಿ ಉಪಯೋಗಕ್ಕೆ ಬರುವುದ ರಿಂದ ಇದನ್ನು ಹೇರಳವಾಗಿ ಬೆಳೆಸಬಹುದು.



# ವೇದಗಳಲ್ಲಿ ಸೂರ್ಯವಿಜ್ಞಾನ

---ಅನಂತ ಚಿಂತಾಮಣಿ ಜ್ಯೋತಿಷಿ.

ವೇದಮಂತ್ರಗಳಲ್ಲಿ ಸೂರ್ಯವಿಜ್ಞಾನವಿಷಯ ವಿಪುಲವಾಗಿವೆ. ವೇದಗಳು ಸೂರ್ಯನನ್ನು ಇಡೀ—ಚರಾಚರ ಜಗತ್ತಿನ ಉತ್ಪಾದಕನೆಂದು ವರ್ಣಿಸಿವೆ. ನೂನಂ ಜನಾಃ ಸೂರ್ಯೇಣ ಪ್ರಸೂತಾಃ ಮತ್ತು ಇವನನ್ನು ಪ್ರಾಣಃ ಪ್ರಜಾನಾಮ್ ಎನ್ನಲಾಗುತ್ತಿದೆ. ವೇದಗಳಲ್ಲಿ ಸೂರ್ಯನನ್ನು ಇಂದ್ರನೆಂದು ಕರೆಯಲಾಗಿದೆ. "ಇಂದ್ರಾಯ ಗಿರೋ ಅನಿಶಿತಸರ್ಗಾ ಅಪಃ ಪ್ರೇರಣಂ ಸಗರಸ್ಯ ಬುಧ್ನಾತ್" --ಎಂದು ಸೂರ್ಯನನ್ನು ಋಗ್ವೇದವೂ ವರ್ಣಿಸಿದೆ. ಇಲ್ಲಿ ಇಂದ್ರ ಪದವು ಸೂರ್ಯನ ಬೋಧಕವಾಗಿದೆ. ಇಂದ್ರಪದವೂ ಅಂತರಿಕ್ಷ ದೇವತೆ ವಿದ್ಯುತ್ತಿಗಾಗಿ ಪ್ರಯುಕ್ತಗೊಳಿಸಿದೆ. ಇಂದ್ರ ಪದದ ಎರಡೂ ಪ್ರಕಾರಗಳ ಅರ್ಥ ಸಾಯಣಭಾಷ್ಯದಲ್ಲಿ ದೊರಕುತ್ತದೆ. ೧೪ ವೇಧಗಳಿಂದ ವರ್ಣಿಸಲ್ಪಟ್ಟಿವೆ. ಸಹ ಸ್ವಾನ್ ಹಾಗೂ ಮರುತ್ವಾನ್ ಎಂಬ ಎರಡು ವಿಶೇಷಣಗಳಿವೆ.

ಪ್ರಕೃತಿಯ ರಹಸ್ಯವನ್ನರಿಯಲು ಸೂರ್ಯನು ಸಾಧನಸ್ವರೂಪನಾಗಿರುವನು. ಸೂರ್ಯನಿಂದಲೇ ಚರಾಚರ ಜಗತ್ತಿನ ಉತ್ಪತ್ತಿಯಾಯಿತೆಂದು ಶ್ರುತಿಯಲ್ಲಿ ಸ್ಪಷ್ಟಪಡಿಸಲಾಗಿದೆ. ಪ್ರಸವಧರ್ಮದ ಕಾರಣಕ್ಕಾಗಿ ಸೂರ್ಯನಿಗೆ ಸವಿತಾ ಹೆಸರು ಸಾರ್ಥಕವಾಯಿತೆಂದು ಮೈತ್ರಿ ಉಪನಿಷತ್ತು ಹೇಳುತ್ತದೆ. ಬೃಹದ್ಯೋಗ ಯಾಜ್ಞವಲ್ಕದಲ್ಲಿ ಕೂಡ--

ಸವಿತಾ ಸರ್ವಭಾವಾನಾಂ
ಸರ್ವಭಾವಾಂಶ್ಚ ಸೂಯತೇ
ಸವನಾತ್ ಪ್ರೇರಣಾಚ್ಚೈವ
ಸವಿತಾ ತೇನ ಚೋಚ್ಯತೇ

--ಈ ರೀತಿ ವರ್ಣಿಸಲ್ಪಟ್ಟಿದೆ. ಶ್ರುತಿಯಲ್ಲಿ ಪೂರ್ವಾಹ್ನದೊಳಗೆ ಸೂರ್ಯನು ಋಗ್ವಾರಾ, ಮಧ್ಯಾಹ್ನ ಯಜುಃದ್ವಾರ ಮತ್ತು ಅಸ್ತಕಾಲದಲ್ಲಿ ಸಾಮದ್ವಾರಾ ಯುಕ್ತನಾಗಿರುವನು. ಸೂರ್ಯ ಸಿದ್ಧಾಂತಕಾರರು ಋಕ್ -- ಇದು ಸೂರ್ಯನ ಮಂಡಲವಾಗಿದ್ದು ಮತ್ತು ಯಜುರ್ ಹಾಗೂ ಸಾಮವು ಅವನ ಮೂರ್ತಿಯಾಗಿವೆ. ಅವನು ಕಲಾತ್ಮಕ, ಕಾಲಕೃತ, ತ್ರಯಿಮಯ ಭಗವಾನ್ ಎಂದು ಹೇಳಿರುವರು.

ವಸ್ತುತಃ, ಪ್ರಣವದ ಉದ್ಗೀತವು ಸೂರ್ಯನು. ಅವನು ನಾದಬ್ರಹ್ಮವಾಗಿದ್ದು ನಿರಂತರವಾಗಿ ರವವನ್ನು ಮಾಡುವ ಕಾರಣದಿಂದ ರವಿ ಎಂದು ವಿಖ್ಯಾತನಾಗಿರುವನು. ಛಾಂದೋಗ್ಯ ಉಪನಿಷದದ ೧--೪--೧೫ ರಲ್ಲಿ ತ್ರಯಿವಿದ್ಯೆ -- ಛಂದೋರೂಪಃ ಮೂರು ವೇದಗಳೂ ಈ ಉದ್ಗೀತವನ್ನು ಆವೃತ್ತಗೊಳಿಸಿವೆ. ಇದರ ಹೊರಗೆ ಮೃತ್ಯುರಾಜ್ಯವಿದೆ. ದೇವತೆಗಳು ಮೃತ್ಯುಭಯದಿಂದ ಹೆದರಿ ಎಲ್ಲಕ್ಕಿಂತ ಮೊದಲು ವೇದಕ್ಕೆ ಶರಣು ಬಂದರು. ಮತ್ತು ಛಂದಗಳ ಮೂಲಕ ತಮ್ಮನ್ನು ಆಚ್ಛಾದಿತ ಗೊಳಿಸಿಕೊಂಡು ರಕ್ಷಿಸಿಕೊಂಡರು. ಆದರೂ ಕೂಡ ಮೃತ್ಯುವು ಆ ಜನರನ್ನು ನೋಡಹತ್ತಿದನು. ಉದ್ಗೀತವು ಪ್ರಣವ ಅಂದರೆ ಸೂರ್ಯನು ಸದಾ ಸರ್ವದಾ ನಾದಮಾಡುತ್ತಿದ್ದು, ಈ ಪ್ರಣವ ಸೂರ್ಯನಿಗೆ ಎರಡು ಅವಸ್ಥೆಗಳಿವೆ. ಒಂದು ಅವಸ್ಥೆಯಲ್ಲಿ ಈ ಸೂರ್ಯನ ರಶ್ಮಿಮಾಲೆಯು ನಾಲ್ಕು ಕಡೆ ವಿಕೀರ್ಣಗೊಂಡಿದೆ. ಈ ರಶ್ಮಿಗಳು ನೆಟ್ಟಗಿನ ರಸ್ತೆಯ ಸಮಾನವಾಗಿವೆ. ಯಾವ ರೀತಿಯಾಗಿ ರಸ್ತೆಗಳು ಒಂದು ಊರಿನಿಂದ ಇನ್ನೊಂದು ಊರಿನ ತನಕ ಹರಡುತ್ತವೆಯೋ ಹಾಗೆಯೇ ಈ ರಶ್ಮಿಗಳು ಇಹಲೋಕದಿಂದ ಪರಲೋಕದ ತನಕ ಹರಡಿವೆ. ಸೂರ್ಯನ ಒಂದು ಸೀಮೆಯಲ್ಲಿ ಸೂರ್ಯಮಂಡಲವಿದ್ದು ಒಂದು ಗಡಿಗೆ ನಾಡಿಚಕ್ರವಿದೆ. ಸುಷುಪ್ತಿ ಕಾಲದಲ್ಲಿ ಜೀವವು ಈ ನಾಡಿಚಕ್ರವನ್ನು ಪ್ರವೇಶಿಸುತ್ತದೆ. ಆ ವೇಳೆಗೆ ಸ್ವಪ್ನವು ಇರಲಾರದು. ಕಾಂತಿಯು ಹುಟ್ಟುತ್ತದೆ. ಇದೇ ತೇಜಃಸ್ಥಾನವಾಗಿದೆ. ದೇಹತ್ಯಾಗದ ನಂತರ ಜೀವವು ಈ ಎಲ್ಲ ಕಿರಣಗಳನ್ನು ಅವಲಂಬಿಸಿ ಓಂಕಾರ ಭಾವನೆಯ ಸಹಾಯದ ಮೂಲಕ ಮೇಲಕ್ಕೆ ಏಳುತ್ತದೆ. ಸಂಕಲ್ಪಮಾತ್ರದಿಂದಲೇ ಮನದಲ್ಲಿ ವೇಗವು ಉಂಟಾಗುತ್ತಿದ್ದು ಅದೇ ವೇಗದಿಂದ ಸೂರ್ಯ ತನಕ ಉತ್ಥಾನವಾಗುತ್ತದೆ. ಸೂರ್ಯನು ಬ್ರಹ್ಮಾಂಡದ ದ್ವಾರಸ್ವರೂಪನಾಗಿದ್ದು ಜ್ಞಾನಿಗಳು ಈ ದ್ವಾರವನ್ನು ಭೇಧಿಸಿ ಸತ್ಯದಲ್ಲಿ ಮತ್ತು ಅಮರಧಾಮದಲ್ಲಿ ತಲುಪುವರು. ಅಜ್ಞಾನಿಗಳಿಗೆ ಇದು ಅಸಾಧ್ಯ. ಹೃದಯದಲ್ಲಿ ನಾಲ್ಕು ಕಡೆ ಅಸಂಖ್ಯ ನಾಡಿಗಳು ಹರಡಿವೆ. ಕೇವಲ ಒಂದು ಸೂಕ್ಷ್ಮ ಪಥ ಮೇಲಿನ ಮೂರ್ಧದತ್ತ ಹೋಗಿದೆ. ಇದೇ ಸೂಕ್ಷ್ಮದಾರಿಯಿಂದ ಗಮನಿಸಿದರೆ ಸೂರ್ಯದ್ವಾರ ಅತಿಕ್ರಮವಾಗುತ್ತದೆ. ಅನ್ಯಾನ್ಯ ದಾರಿಯಲ್ಲಿ ಹೋದ ನಂತರ ಭುವನ ಕೋಶದಲ್ಲಿಯೇ ಅಬದ್ಧವಾಗಿರಲು ಸಾಧ್ಯ. ಯದ್ಯಪಿ ಭುವನಕೋಶದ ಕೇಂದ್ರವು ಸೂರ್ಯನಾದ ಕಾರಣ ಸಮಸ್ತ ಭುವನವು ಒಂದು ಪ್ರಕಾರದಿಂದ ಸೌರಲೋಕದ ಅಂತರ್ಗತವಾಗಿದೆ. ಎರಡನೆಯ ಅವಸ್ಥೆಯಲ್ಲಿ ಸಮಸ್ತ ರಶ್ಮಿಗಳು ಸಂಹೃತಗೊಂಡು ಮಧ್ಯಬಿಂದುವಿನಲ್ಲಿ ವಿಲೀನವಾಗಿವೆ. ಈ ದ್ವಿತೀಯ ಅವಸ್ಥೆಯೇ ಪ್ರಣವದ ಕೈವಲ್ಯ ಶುದ್ಧಾವಸ್ಥೆಯಾಗಿದೆ.

ಓಂಕಾರವು ಪರ ಮತ್ತು ಅಪರ ಬ್ರಹ್ಮವಾಗಿದೆ. ಓಂ ಅಕ್ಷರದ ಮೂಲಕ ಪರಮಪುರುಷನ ಅಭಿಧ್ಯಾನದ ಪ್ರಭಾವದಿಂದ ತೇಜ ಅಥವಾ ಸೂರ್ಯನಲ್ಲಿ ಸಂಪತ್ತು ಉತ್ಪನ್ನವಾಗುತ್ತದೆ. ಆ ವೇಳೆಗೆ ಸಾಧಕನು ಸೂರ್ಯನ ಜತೆಗೆ ತಾದಾತ್ಮ್ಯ ಹೊಂದುವನು. ಜಾತಿಯಲ್ಲಿ ಹಾಗೂ ಸಂಖ್ಯೆಯಲ್ಲಿ ಅನಂತವಾದ ಸೂರ್ಯರಶ್ಮಿಗಳ ಮೂಲಪ್ರಭೆಯು ಒಂದೇ ಆಗಿದೆ. ಈ ಮೂಲ ವರ್ಗವು ಶುಕ್ಲವರ್ಣವೇ ಆಗಿದೆ. ಈ ಮೂಲ ಶುಕ್ಲವರ್ಣವು ನೀಲಿ ಮೊದಲಾದ ಪರಸ್ಪರ ಕೂಡಿಕೊಂಡ ಕಾರಣ ವಿಭಿನ್ನ ಉಪವರ್ಣಗಳ ರೂಪದಲ್ಲಿ ಬೆಳಗಿದೆ. ಶುಕ್ಲದಿಂದ ಕೆಂಪು ನೀಲ ಪ್ರಭೃತಿ ಪ್ರಥಮಸ್ತರದಲ್ಲಿ ಆವಿರ್ಭವಗೊಂಡಿತು. ಸೂರ್ಯ ವಿಜ್ಞಾನದ ಮೂಲಸಿದ್ಧಾಂತ ಅರಿಯಲು ಅವರ್ಣ ಶುಕ್ಲವರ್ಣ ಮೂಲಕ ವಿಚಿತ್ರವರ್ಣ ವಿಚಿತ್ರ ಉಪವರ್ಣ, ಇತ್ಯಾದಿಗಳ ಅರಿವು ಮಾಡಿಕೊಳ್ಳಬೇಕು. ವರ್ಣದಿಂದ ಮಂತ್ರ, ಮಂತ್ರದಿಂದ ಪದದ ವಿಕಾಸ. ಈ ಪ್ರಕಾರ ವಾಚಕ ಭೂಮಿಯ ಮೇಲೆ ಆಗುವಂತೆ ವಾಚ್ಯವು ಭೂಮಿಯ ಮೇಲೆ ಕಲೆಯಿಂದ ತತ್ವ ಮತ್ತು ತತ್ವದಿಂದ ಭುವನ ಹಾಗೂ ಕಾರ್ಯ ಪದಾರ್ಥದ ಉತ್ಪತ್ತಿ ಮಾಡುತ್ತದೆ. ವಾಕ್ ಮತ್ತು ಅರ್ಥದ ನಿತ್ಯಸಂಯುಕ್ತದ ಕಾರಣದಿಂದ ವರ್ಣವನ್ನು ಅಧಿಕೃತ ಗೊಳಿಸಿದ್ದಾರೆ ಹಾಗೂ ಕಲೆಯನ್ನು ಕೂಡ ಅಧಿಕೃತ ಗೊಳಿಸಿರುವರು.

ಪ್ರತಿಯೊಂದು ವಸ್ತುವಿನಲ್ಲೂ ಒಂದು ಪ್ರಕಾರದ ಶಕ್ತಿಯಿದೆ. ಹೀಗಾಗಿ ಕೆಲ ವಸ್ತುಗಳು ಸೂರ್ಯ ಕಿರಣಗಳ ತುಸು ರೂಪವನ್ನು ಪಡೆದುಕೊಳ್ಳುತ್ತದೆ. ರೂಪಗಳ ಆಧಾರ -- ರೂಪಗಳನ್ನು ರಚಿಸುವಲ್ಲಿ ಸೂರ್ಯಕಿರಣಗಳ ಪಾತ್ರವು ಹಿರಿದಾಗಿದೆ.

ಈ ವೇದ ವರ್ಣದಲ್ಲಿ ರೂಪ ವಿಜ್ಞಾನದ ಅಂಶವಿದೆ. ಅಲ್ಲದೇ ಸೂರ್ಯ ಕಿರಣಗಳ ಮೂಲಕ ವಿದ್ಯುತ್ತನ್ನು ಉತ್ಪಾದಿಸಬಹುದು --ಎಂದು ವೇದಗಳಲ್ಲಿ ಅಲ್ಲಲ್ಲಿ ಹೇಳಲಾಗಿದೆ. ಅಂದಮೇಲೆ ನಮ್ಮ ವೈದಿಕ ಋಷಿವರ್ಯರು ಇಂದಿನ ವಿಜ್ಞಾನಿಗಳಿಗಿಂತ ಮೇಲ್ಮಟ್ಟವವರೆಂದು ಹೇಳಲೇಬೇಕು. ಕಲ್ಪವೃಕ್ಷ ತುಲ್ಯವೆನಿಸುವ ಕಿರಣಗಳನ್ನು ನೀಡುವ ಸೂರ್ಯದೇವನಿಗೆ ಇದೋ ನಮನಗಳು.

ಸರ್ವೇSತಿ ನಾಮ್ನಾ ಭಗವಾನ್ ನಿಗದ್ಯತೇ
ಸೂರ್ಯೋSಪಿ ಸರ್ವೇಷು ವಿಭಾತಿ ಭಾಷಯಾ
ಬ್ರಹ್ಮೈವ ಸೂರ್ಯಃ ಸಮುದೇತಿ ನಿತ್ಯಶಃ
ತಸ್ಮೈ ನಮೋಧ್ವಾಂತ ವಿಮೋಚಕಾರಿಣೇ 

# ತಿರುಮಲೆಯ ಸ್ವಾಮಿ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಶ್ರೀ ವೆಂಕಟೇಶ್ವರನನ್ನು ಪ್ರತಿನಿಧಿಸುವ ಅರ್ಚಾಮೂರ್ತಿಗಳು ಐದು ಇವೆ. ಅವುಗಳನ್ನು ವಿವಿಧ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಅವುಗಳ ವಿವರಣೆಯನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ.

ತಿರುಮಲೆಯಲ್ಲಿನ ಸ್ವಾಮಿಯನ್ನು ವೆಂಕಟೇಶ ಎನ್ನುತ್ತಾರೆ. ಶ್ರೀನಿವಾಸ, ತಿರುಮಲೆಯಪ್ಪ, ತಿಮ್ಮಪ್ಪ, ಗೋವಿಂದ, ಶ್ರೀ ವೆಂಕಟೇಶ್ವರಸ್ವಾಮಿ, ಏಳುಬೆಟ್ಟ ನೊಡೆಯ, ಮಲೆಯಪ್ಪ ಸ್ವಾಮಿ --ಎಲ್ಲ ಹೆಸರುಗಳೂ ಅವನಿಗೇ. ಆತ ವೈಕುಂಠವನ್ನು ಬಿಟ್ಟು ಸ್ವಾಮಿ ಪುಷ್ಕರಿಣೀ ತೀರದಲ್ಲಿ ಬಂದು ನೆಲೆಸಿದ ಮೇಲೆ, ಆ ಸ್ವಯಂ ವ್ಯಕ್ತ ಭಗವಂತನಿಗೆ ಗುಡಿಕಟ್ಟಿದರು. ಮೊದಲಿಗೆ ಆಳ್ವಾರರುಗಳಲ್ಲಿ ಮಲೆಯಲ್ಲಿ ನಿಂತಿರುವ ಸ್ವಾಮಿ ಕಂಡುಬರುವುದಾದರೂ ನಂತರದ ಸಾಹಿತ್ಯದಲ್ಲಿ ಗುಡಿಯೂ ಕಂಡು ಬರುತ್ತದೆ. ಅಲ್ಲಿಂದ ಮುಂದೆ ವಿವಿಧ ಪೂಜೆಗಳಿಗಾಗಿ ತಕ್ಕ ದ್ರವ್ಯದ -- ಸಾಹಿತ್ಯದ ಪೂರೈಕೆಗಾಗಿ ಉಂಟಾದ ದಾನಶಾಸನಗಳೂ ಕಂಡುಬರುತ್ತವೆ. ಭಕ್ತರು ತಮಗೆ ತೋಚಿದಂತೆ ಶಕ್ತಿಗೆ ತಕ್ಕಂತೆ ಆಗಮಾನುಸಾರವಾಗಿ ಪೂಜೆಯನ್ನು ಸಲ್ಲಿಸುತ್ತ ಬಂದರು. ಆದರೆ ಅನೇಕ ಉತ್ಸವಗಳಲ್ಲಿ, ವಾಹನಗಳಲ್ಲಿ, ಓಲಗದಲ್ಲಿ, ಪಲ್ಲಂಗದಲ್ಲಿ, ಪಲ್ಲಕ್ಕಿಯಲ್ಲಿ ಬಿಜಮಾಡಿಸುವ, ಅನುಗ್ರಹಿಸುವ ದೇವರು ಒಬ್ಬ ತಿರುಮಲೆಯಪ್ಪನೇ ಎಂದರೆ ಅಲ್ಲವೆಂದೇ ಹೇಳಬೇಕು. ಸ್ಥೂಲ ದೃಷ್ಟಿಯಿಂದ ನೋಡಿದರೆ -- ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ --ಎಂಬಂತೆ, ಎಲ್ಲ ಸೇವೆಗಳೂ ಉತ್ಸವಗಳೂ ಸರ್ವಂ ಕೃಷ್ಣಾರ್ಪಣ ಆದಂತೆ, ಅವನಿಗೇ ಸೇರುತ್ತವೆ ಎಂಬುದು ಮೂಲ ಮಂತ್ರ ಸೂತ್ರ. ಆದರೆ ಬಳಕೆಗೆ ಬರುವ ವಿಗ್ರಹಗಳು ಬೇರೆಬೇರೆ ಎಂಬುವನ್ನು ಕಾಣಬಹುದು.

ಪ್ರತಿ ದೇವಾಲಯದಲ್ಲೂ ಮೂಲಮೂರ್ತಿ ಉತ್ಸವಮೂರ್ತಿ ಇರುವುದು ಸಹಜವೇ. ಗರ್ಭಗೃಹದಲ್ಲಿಯೇ ನಡೆಸಲ್ಪಡುವ ಸೇವೆಗಳನ್ನೆಲ್ಲ ಮೂಲ



ಮೂರ್ತಿಗೆ ಮಾಡಿ, ಗರ್ಭಗೃಹದ ಹೊರಗೆ ನಡೆಯತಕ್ಕ ಸೇವೆಗಳನ್ನು ಮೂಲಮೂರ್ತಿಯ ಪ್ರತಿನಿಧಿಯಾಗಿರುವ ಉತ್ಸವಮೂರ್ತಿಗೆ ಮಾಡುವುದು ಕಾಲದಿಂದ ನಡೆದು ಬಂದ ಪರಂಪರೆ. ತಿರುಮಲೆಯಲ್ಲೂ ಸ್ವಾಮಿಯ ಸೇವೆ ಇದೇ ರೀತಿಯಲ್ಲಿಯೇ ನಡೆದರೂ, ಇಲ್ಲಿ ಉತ್ಸವಕ್ಕೆ ಬರುವ ಮೂರ್ತಿಗಳು ೧) ಧ್ರುವ ಬೇರ, ೨) ಕೌತುಕ ಬೇರ, ೩) ಸ್ನಪನ ಬೇರ, ೪) ಓಲಗ ಬೇರ, ೫) ಉತ್ಸವ ಬೇರ. ಬೇರ ಎಂದರೆ ಮೂರ್ತಿ ಎಂದರ್ಥ. ತಿರುಮಲೆಯ ಆಲಯದಲ್ಲಿ ಈ ಐದೂ ರೀತಿಯ ವಿಗ್ರಹಗಳೂ ಉಂಟು. ಅವುಗಳ ವಿವರವನ್ನಿಲ್ಲಿ ಕಾಣಿಸಲಾಗಿದೆ.

## ಧ್ರುವಮೂರ್ತಿ :

ಮೂಲವಿರಾಟ್, ಧ್ರುವಬೇರ, ಸ್ಥಾನಕ ಮೂರ್ತಿ -- ಹೀಗೆ ಈ ಮೂರ್ತಿಯನ್ನು ಗುರುತಿಸಬಹುದು. ಆನಂದ ನಿಲಯದಲ್ಲಿ (ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಗರ್ಭಗುಡಿಯ ಗೋಪುರಕ್ಕೆ ಆನಂದ ನಿಲಯ ವಿಮಾನವೆನ್ನುತ್ತಾರೆ.) ಸ್ವಯಂಭುವಾಗಿ ಶಂಖ ಚಕ್ರಾದಿಗಳೊಡನಿರುವ ಸುಮಾರು ಹತ್ತು ಅಡಿ ಎತ್ತರದ ಕಪ್ಪುಶಿಲೆಯ ಮೂರ್ತಿ.



ಸ್ಥಾನಕ ಮೂರ್ತಿಗೆ ದಿನಕ್ಕೆರಡುಬಾರಿ ತೋಮಾಲಸೇವೆ, ಮೂರು ಬಾರಿ ಅರ್ಚನೆ, ನೈವೇದ್ಯಗಳು ನಡೆಯುವುವು. ಪ್ರತಿದಿನವೂ ದೂರದೂರುಗಳಿಂದ ಭಕ್ತರು ಬಂದು ದರ್ಶಿಸಲು ಸರದಿಯಸಾಲಿನಲ್ಲಿ ನಿಂತು ನಡೆದು ಕಂಡು ನಮಿಸುವುದು ಈ ವಿಗ್ರಹವನ್ನೇ. ಈ ವಿಗ್ರಹದ ವಕ್ಷಃಸ್ಥಲದಲ್ಲಿ ಮಹಾಲಕ್ಷ್ಮಿಯಿದ್ದಾಳೆ. ಸ್ವಾಮಿಗೆ ಅರ್ಚನೆ ನಡೆದಕೂಡಲೇ ಅಮ್ಮನವರಿಗೆ ಮತ್ತೆ ಅರ್ಚನೆ ನಡೆಯುತ್ತದೆ. ಪ್ರತಿ ಮಂಗಳವಾರ ಮಧ್ಯಾಹ್ನ ೧೧. ಗಂಟೆಗೆ ಎರಡನೆ ಅರ್ಚನೆಯ ವೇಳೆಯಲ್ಲಿ ಮೂಲಮೂರ್ತಿಗೆ ೧೦೮ ಬಂಗಾರದ ಕಮಲಗಳಿಂದ ಅಷ್ಟದಳ ಪದ್ಮಾರಾಧನೆ ನಡೆಯುತ್ತದೆ. ಪ್ರತಿಗುರುವಾರ ಎರಡನೆಯ ಅರ್ಚನೆಯ ಸಮಯದಲ್ಲಿ ನೇತ್ರದರ್ಶನ, ತಿರುಪ್ಪಾವಡಾ, ಅಂದು ಸಂಜೆ ಪೂಲಂಗಿ ಸೇವೆ, ಈ ಸ್ವಾಮಿಗೇ ನಡೆಯುತ್ತದೆ. ಆ ಮರುದಿನ -- ಶುಕ್ರವಾರ ಬೆಳಗ್ಗೆ ಸುಗಂಧ ದ್ರವ್ಯಗಳಿಂದ ಅಭಿಷೇಕ ನಡೆಯುವುದು ಈ ಮೂಲಮೂರ್ತಿಗೆ. ಪ್ರತಿದಿನವೂ ರಾತ್ರಿ ಬ್ರಹ್ಮಾದಿಗಳು ಬಂದು ಅರ್ಚಿಸುವುದೂ ಈ ಮೂರ್ತಿಯನ್ನೇ. ಈ ಮೂಲಮೂರ್ತಿಗೆ ವಜ್ರಕಿರೀಟ, ಹಾರ ಕೇಯೂರ, ಕಡಗ ಮೊದಲಾದ ಅತಿಬೆಲೆಬಾಳುವ ಆಭರಣಗಳ ಅಲಂಕಾರವೂ ಸಲ್ಲುತ್ತದೆ.

## ಕೌತುಕ ಮೂರ್ತಿ :

ಈ ವಿಗ್ರಹಕ್ಕೆ ಮನವಾಳ ಪ್ಪೆರುಮಾಳ್, ಭೋಗ ಶ್ರೀನಿವಾಸಮೂರ್ತಿ, ಕೌತುಕ ಮೂರ್ತಿ ಎಂಬ ಹೆಸರುಗಳು. ಚತುರ್ಭುಜನಾಗಿ ಶಂಖಚಕ್ರಧಾರಿಯಾದ ಈ ಮೂರ್ತಿ ಎಲ್ಲ ವಿಧದಲ್ಲಿಯೂ ಮೂಲ

ಮೂರ್ತಿಯ ಕಿರಿದಾದ ಪ್ರತಿರೂಪ. ಈ ಬೆಳ್ಳಿಯ ಮೂರ್ತಿಯನ್ನು ಕ್ರಿ.ಶ. ೬೧೪ ರಲ್ಲಿ ಪಲ್ಲವನ ರಾಣಿ -- ಕಾಡವನ್ ಪೆರುಂದೇವಿ -- ಸಾಮವೈ ರಾಣಿ ಉತ್ಸವಗಳಲ್ಲಿ ಬಳಸಲೆಂದು ದೇವಾಲಯಕ್ಕೆ ನೀಡಿದಳು. ಮೂಲಮೂರ್ತಿಯ ಪಾದಗಳ ಮುಂದೆ ಈ ಭೋಗಶ್ರೀನಿವಾಸ ಮೂರ್ತಿಯನ್ನು ಭಕ್ತರು ನೋಡಬಹುದು. ಈ ಭೋಗ ಮೂರ್ತಿಗೇ ಪ್ರತಿ ಬುಧವಾರ ಬೆಳಗ್ಗೆ ಬಂಗಾರದ ಬಾಗಿಲಬಳಿ ಸಹಸ್ರ ಕಲಶಾಭಿಷೇಕ ನಡೆಯುತ್ತದೆ. ಆ ಸಮಯದಲ್ಲಿ ಸ್ವಾಮಿಯ ಮೂರ್ತಿಯೊಡನೆ ಭೋಗಮೂರ್ತಿಯನ್ನು ಬಂಗಾರದ ದಾರದಿಂದ ಕಟ್ಟಿ ಸಾಕ್ಷಾತ್ ಮೂಲಮೂರ್ತಿಯ ಸನ್ನಿಧಿಯನ್ನು ಈ ಮೂರ್ತಿಯಲ್ಲಿ ಅನುಸಂಧಾನ ಗೊಳಿಸುವರು.

ಈ ಭೋಗಶ್ರೀನಿವಾಸ ಮೂರ್ತಿಗೆ ಪ್ರತಿದಿನವೂ ತಿರುಮಲೆಯ ಆಕಾಶಗಂಗೆಯಿಂದ ನೀರನ್ನು ತಂದು ಅಭಿಷೇಕ ಮಾಡುವರು. ರಾತ್ರಿಯ ಹೊತ್ತಿನ ಏಕಾಂತ ಸೇವೆಯಲ್ಲಿ ಶಯನ ಮಂಟಪದಲ್ಲಿ ಈ ಭೋಗ ಶ್ರೀನಿವಾಸನನ್ನೇ ಶಯನಗೊಳಿಸುವರು. ಆದರೆ ಧನುರ್ಮಾಸದಲ್ಲಿ ೩೦ ದಿನಗಳ ಕಾಲ ಶ್ರೀಕೃಷ್ಣ ವಿಗ್ರಹಕ್ಕೆ ಈ ಅವಕಾಶ ದೊರೆಯುತ್ತದೆ.

## ಸ್ನಪನ ಮೂರ್ತಿ :

ಉಗ್ರ ಶ್ರೀನಿವಾಸ ಮೂರ್ತಿ, ವೆಂಕಟ ತುರೈಯಾರ್, ಸ್ನಪನ ಮೂರ್ತಿ ಎಂದೆಲ್ಲ ಈ ಸ್ವಾಮಿಗೆ ಹೆಸರುಗಳು. ಶ್ರೀದೇವಿ ಭೂದೇವಿ ಸಹಿತವಾದ ಉಗ್ರ ಶ್ರೀನಿವಾಸನ ಪಂಚ ಲೋಹ ವಿಗ್ರಹಗಳು ಭೋಗಶ್ರೀನಿವಾಸನಿಗಿಂತ ಮೊದಲಿನಿಂದಲೇ ಆಲಯದಲ್ಲಿ ಇದ್ದಂತೆಯೂ ಆಯಾ ಉತ್ಸವಗಳಲ್ಲಿ ಪಾಲುಗೊಳ್ಳುತ್ತಿದ್ದಂತೆಯೂ ತಿಳಿಧುಬರುತ್ತದೆ.


ಓಲಗ ಶ್ರೀನಿವಾಸ

ಆದರೆ ಒಂದೊಮ್ಮೆ ಬ್ರಹ್ಮೋತ್ಸವ ಸಮಯದಲ್ಲಿ ಭಯಂಕರ ಪರಿಣಾಮಗಳು ಉಂಟಾದ್ದರಿಂದ ಆಯಾ ಉತ್ಸವಗಳಲ್ಲಿ ಈ ಉಗ್ರ ಶ್ರೀನಿವಾಸನ ಮೂರ್ತಿಯನ್ನು ಬಳಸುವುದು ನಿಂತು ಹೋಯಿತು.

ಆದರೂ ವರ್ಷದಲ್ಲಿ ಉತ್ಥಾನ ಏಕಾದಶಿ, ಮುಕ್ಕೋಟಿದ್ವಾದಶಿ, ದ್ವಾದಶ ತಿರುವಾರಾಧನ, ಮೊದಲಾದ ಪರ್ವದಿನಗಳಲ್ಲಿ ಈ ಸ್ವಾಮಿಗೆ ಉತ್ಸವ ನಡೆಯುತ್ತದೆ. ಸೂರ್ಯರಶ್ಮಿ ಸೋಕಿದರೆ ಸ್ವಾಮಿಗೆ ಉಗ್ರತೆ ಬರುವುದೆಂದೂ, ಹಾಗಾಗಿಯೇ ಇಂದಿಗೂ ಈ ಉತ್ಸವಗಳೆಲ್ಲ ಸೂರ್ಯೋದಯಕ್ಕೆ ಮೊದಲೇ ನಡಯುತ್ತವೆ. ಉಗ್ರ ಶ್ರೀನಿವಾಸ ಮೂರ್ತಿ ಸುಮಾರು ೧೮ ಅಂಗುಲಗಳಿದ್ದು ೭ ಅಂಗುಲದ ಪೀಠದ ಮೇಲೆ ಏರ್ಪಾಡಾಗಿದೆ.

## ಬಲಿ ಮೂರ್ತಿ :

ಓಲಗ ಶ್ರೀನಿವಾಸ, ಲೇಖನ ಶ್ರೀನಿವಾಸ ದರ್ಬಾರ್ ಶ್ರೀನಿವಾಸ, ಎಂಬುದಾಗಿ ಈ ಮೂರ್ತಿಗೆ ಹೆಸರುಗಳು. ಸರಿಸುಮಾರು ಬೆಳ್ಳಿಯ ಭೋಗ ಶ್ರೀನಿವಾಸ ಮೂರ್ತಿಯ ಹಾಗೆಯೇ ಇರುವ ಪಂಚ ಲೋಹ ವಿಗ್ರಹವಿದು.

ಪ್ರತಿದಿನವೂ ತೋಮಾಲೆ ಸೇವೆ (ಪುಷ್ಪಾಲಂಕಾರ) ಅರ್ಚನೆಗೆ ಮೊದಲೇ ಮೂಲ ಮೂರ್ತಿಗೆ ನಡೆಯುತ್ತದೆ. ಆ ನಂತರ ಸ್ನಪನ ಮಂಟಪದಲ್ಲಿ ದರ್ಬಾರ್ ಶ್ರೀನಿವಾಸನನ್ನು ಬಂಗಾರದ ಸಿಂಹಾಸನಕ್ಕೆ ಕರೆದೊಯ್ದು ಆಸಿನಗೊಳಿಸಿ ಛತ್ರ ಚಾಮರ ಮರ್ಯಾದೆಗಳಿಂದ ಆಸ್ಥಾನವನ್ನು ಏರ್ಪಡಿಸಲಾಗುತ್ತದೆ. ಈ ಓಲಗದಲ್ಲಿ ಸ್ವಾಮಿಗೆ ಪಂಚಾಂಗ ಶ್ರವಣ ನಡೆದು, ಆಯಾದಿನದ ಉತ್ಸವ ವಿಶೇಷಗಳನ್ನೂ ತಿಳಿಸಲಾಗುತ್ತದೆ. ಅಷ್ಟೇ ಅಲ್ಲದೆ ಆ ಹಿಂದಿನ ದಿನದ ಆದಾಯ, ಆರ್ಜಿತ ಸೇವೆಯಿಂದ, ಹುಂಡಿಯಿಂದ, ಬಂದ ಆದಾಯ, ಬಂಗಾರ ಬೆಳ್ಳಿಯ ಆಭರಣಗಳ ಪಾತ್ರೆಗಳ ಸಮಸ್ತದ ನಿಕರವಾದ ಬೆಲೆಗಟ್ಟಿ ಮೊತ್ತವನ್ನು ಪೈಸೆಗಳೊಂದಿಗೆ ಸ್ವಾಮಿಗೆ ತಿಳಿಸಲಾಗುತ್ತದೆ. ಈ ದರ್ಬಾರ್ ಶ್ರೀನಿವಾಸ ಮೂರ್ತಿಯನ್ನು ಒಂದು ರೀತಿಯಲ್ಲಿ ದೇವಸ್ಥಾನದ ಲೆಕ್ಕಗಳನ್ನು ಪರ್ಯವೇಕ್ಷಿಸುವ ಅಧಿಕಾರ ಮೂರ್ತಿ ಎಂದು ತಿಳಿಯಬಹುದು. ಈ ದರ್ಬಾರಿನಲ್ಲಿ ಸ್ವಾಮಿಗೆ ಬೆಲ್ಲದೊಡನೆ ಕಲೆಸಿದ ಎಳ್ಳಿನ ಹಿಟ್ಟನ್ನು ನಿವೇದಿಸುವರು.

## ಉತ್ಸವ ಮೂರ್ತಿ :

ಮಲೆಯಪ್ಪಸ್ವಾಮಿ, ಮಲೆಯಕುನಿಯ ನಿನ್ನಪೆರುಮಾಳ್, ಉತ್ಸವಮೂರ್ತಿ ಎಂದು ಈ ಮೂರ್ತಿಯನ್ನು ಕರೆಯುವರು.



ಈ ಉತ್ಸವ ಮೂರ್ತಿಯ ಪ್ರಸ್ತಾವನೆ ಕ್ರಿ.ಶ. ೧೩೩೯ರ ಶಾಸನದಲ್ಲಿ ಕಂಡುಬರುತ್ತದೆ. ಅಂದಿನಿಂದಲೂ ಕಲ್ಯಾಣೋತ್ಸವ, ಮೆರವಣಿಗೆಗಳು, ವಸಂತೋತ್ಸವ, ಬ್ರಹ್ಮೋತ್ಸವ ಮೊದಲಾದ ವಾರ್ಷಿಕ ಉತ್ಸವಗಳಲ್ಲಿ ಈ ಮಲೆಯಪ್ಪಸ್ವಾಮಿಯನ್ನೇ ಸೇವಿಸಲಾಗುತ್ತದೆ. ಅದಕ್ಕೂ ಮೊದಲು ಉಗ್ರ ಶ್ರೀನಿವಾಸ ಮೂರ್ತಿಯನ್ನು ಬಳಸುತ್ತಿದ್ದರೆಂದು ಐತಿಹ್ಯವಿದೆ.

ಪ್ರಸ್ತುತ ಬಂಗಾರದ ಬಾಗಿಲಿನಿಂದಾಚೆಗೆ ನಡೆಯುವ ಕಲ್ಯಾಣೋತ್ಸವ ವಸಂತೋತ್ಸವ ಪುಷ್ಪಯಾಗೋತ್ಸವ, ಪವಿತ್ರೋತ್ಸವ, ಮೊದಲಾದ ಎಲ್ಲ ಉತ್ಸವ ಮೆರವಣಿಗೆಗಳಲ್ಲೂ ಮಲೆಯಪ್ಪಸ್ವಾಮಿಗೇ ಸೇವೆಸಲ್ಲುತ್ತದೆ.

ಈ ಮಲೆಯಪ್ಪಸ್ವಾಮಿ ವಿಗ್ರಹ ೧೪ ಅಂಗುಲಗಳ ಪದ್ಮಪೀಠದ ಮೇಲೆ ಮೂರು ಅಡಿ ಎತ್ತರದ್ದಾಗಿದೆ. ಸ್ವಾಮಿಯ ಬಲಭಾಗದಲ್ಲಿ ೪ ಅಂಗುಲ ಪೀಠದ ಮೇಲೆ ೩೦ ಅಂಗುಲ ಎತ್ತರದ ಶ್ರೀದೇವಿ ವಿಗ್ರಹ, ಎಡಭಾಗದಲ್ಲಿ ಅಷ್ಟೇ ಎತ್ತರದ ಭೂದೇವಿ ವಿಗ್ರಹಗಳಿವೆ.

ಶ್ರೀ ಶ್ರೀನಿವಾಸಃ ಪರದೈವತಂ ನಃ
ಶ್ರೀ ಶ್ರೀನಿವಾಸಃ ಪರಧನಂ ನಃ
ಶ್ರೀ ಶ್ರೀನಿವಾಸಃ ಕುಲದೈವತಂ ನಃ
ಶ್ರೀ ಶ್ರೀನಿವಾಸಃ ಪರಮಾಗತಿಃ ನಃ

ತೆಲುಗು ಮೂಲ : **ಜೆ. ಬಾಲಸುಬ್ರಹ್ಮಣ್ಯಂ.**
ಅನುವಾದ : **ಬಿ. ಎಸ್. ಎಸ್.**

• • •

# ಶ್ರೀ ವೇಂಕಟೇಶ ಸುಪ್ರಭಾತಮ್



**ಕೌಸಲ್ಯಾ ಸುಪ್ರಜಾ ರಾಮ! ಪೂರ್ವಾಸಂಧ್ಯಾ ಪ್ರವರ್ತತೇ,**
**ಉತ್ತಿಷ್ಠ ನರಶಾರ್ದೂಲ ! ಕರ್ತವ್ಯಂ ದೈವಮಾಹ್ನಿಕಮ್.** ೧

'ಕೌಸಲ್ಯೆಯು ಸುಪುತ್ರವತಿ; ಪುರುಷಶ್ರೇಷ್ಠನಾದ ಎಲೈ ರಾಮ! ಇದೋ ಪೂರ್ವ ಸಂಧ್ಯೆಯು ಪ್ರಾದುರ್ಭವಿಸುತ್ತಿದೆ; ಏಳೆಲೌ --ನರಶ್ರೇಷ್ಠ! ದೇವಸಂಬಂಧಿಯಾದ ಆಹ್ನಿಕವು ಅನುಷ್ಠೇಯವಾಗಿದೆ' ಇದು ಸಾಮಾನ್ಯವಾಗಿ ಇದರ ಅರ್ಥ. ಈ ಪದ್ಯವು ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ (೨೩ ನೇ ಸರ್ಗ--೨ ನೇ ಪದ್ಯ) ವಿಶ್ವಾಮಿತ್ರ ಮಹರ್ಷಿಯು -- ತಾನು ಮಾಡಬೇಕಾಗಿರುವ ಯಜ್ಞದ ಸಂರಕ್ಷಣೆಗಾಗಿ ಶ್ರೀರಾಮ ಲಕ್ಷ್ಮಣರನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಿರುವಾಗ, ಸರಯೂನದೀ ತೀರದಲ್ಲಿ ಶ್ರೀರಾಮನು ರಾತ್ರಿಯನ್ನು ಸುಖನಿದ್ರೆಯಲ್ಲಿ ಕಳೆಯುತ್ತಿರಲು, ಪ್ರಭಾತವಾಗುತ್ತಿರುವಂತೆಯೇ ಶ್ರೀರಾಮನನ್ನು ಎಚ್ಚರಗೊಳಿಸಲು ಹೇಳಿದ ಮಾತು. ಇದು ಶ್ರೀವೇಂಕಟೇಶ ಸುಪ್ರಭಾತದ ಆದಿಯಲ್ಲಿ ಏಕೆ ಬರಬೇಕು -- ಎಂದರೆ, ಕಾರಣಾಂತರಗಳಿಂದ ಸಾವಿರಾರು ನಾಮಧೇಯಗಳನ್ನುಳ್ಳ ಪರಮಾತ್ಮನಿಗೆ ರಾಮನೆಂಬ ಹೆಸರೂ, ಶ್ರೀನಿವಾಸನೆಂಬ ಹೆಸರೂ ಬೇರೆ ಬೇರೆಯಲ್ಲ. 'ದೇವನೊಬ್ಬ; ನಾಮ ಹಲವು' ಇದು ಒಂದು ಕಾರಣ. ಎರಡನೆಯದಾಗಿ ಶ್ರೀನಿವಾಸನೂ ಜಗತ್ಕಲ್ಯಾಣಕಾಮನಾಗಿಯೇ ನೆಲೆಸಿರುವುದರಿಂದಲೂ, ಶ್ರೀರಾಮಚಂದ್ರನೂ ಅದೇ ಉದ್ದೇಶದಿಂದಲೇ ಅವತರಿಸಿದ್ದುದರಿಂದಲೂ ಈ ಪದ್ಯವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಪ್ರಕೃತ, ಈ ಪದ್ಯದಲ್ಲಿ ತೋರುವ ವಿಶೇಷಾರ್ಥವನ್ನೂ ಮುಂದಿನ ಪದ್ಯಗಳ ಅಭಿಪ್ರಾಯವನ್ನೂ ಗಮನಿಸೋಣ.

ಮಹರ್ಷಿಯಾದ ವಿಶ್ವಾಮಿತ್ರನು ರಾಮನನ್ನು ಸಂಬೋಧಿಸುತ್ತಾ 'ಕೌಸಲ್ಯಾ ಸುಪ್ರಜಾ' --ಎನ್ನುತ್ತಾನೆ. ಕೌಸಲ್ಯೆಯು ಸುಪುತ್ರವತಿಯೆಂದು ಕೆಲವರೂ, ಕೌಸಲ್ಯೆಯ ಸುಪುತ್ರನೇ --ಎಂದು ಕೆಲವರೂ ಇದರ ಅರ್ಥವನ್ನು ಹೇಳುತ್ತಾರೆ. ಯಾವ ರೀತಿಯಿಂದ ಹೇಳಿದರೂ ಈ ಅರ್ಥವು ಬಹು ಗಂಭೀರವೂ, ಉದಾತ್ತವೂ ಆಗಿರುತ್ತದೆ. ಕೌಸಲ್ಯೆ ಮತ್ತು ದಶರಥ ಇವರಿಬ್ಬರ ತಪಸ್ಸಿನ ಫಲವಾಗಿ ಶ್ರೀರಾಮನು ಅವತರಿಸಿದ್ದರೂ ಸಹ ಕೌಸಲ್ಯೆಯ ಸುಪುತ್ರನೆಂದು ಹೇಳುವುದರಿಂದ ತಂದೆಗಿಂತಲೂ ತಾಯಿಯದೇ ಪ್ರಾಧಾನ್ಯವೆಂದು ತೋರುತ್ತದೆ. 'ಮಾತೃದೇವೋ ಭವ, ಪಿತೃ ದೇವೋ ಭವ', 'ಮಾತಾ ಪೂರ್ವರೂಪಮ್ ಪಿತಾ ಉತ್ತರರೂಪಮ್' --ಎಂಬ ಶ್ರುತಿ ವಾಕ್ಯಗಳೂ 'ಪಿತುಃ ಶತಗುಣಂ ಮಾತಾ' -- ಎಂಬ ಸ್ಮೃತಿ ವಾಕ್ಯವೂ ಇದನ್ನು ಪುಷ್ಟೀಕರಿಸುತ್ತವೆ. ಇನ್ನೊಂದು ರೀತಿಯಿಂದಲೂ ನಾವು ಇದನ್ನು ಆಲೋಚಿಸಬಹುದು. ವಿಶ್ವಾಮಿತ್ರನು ರಾಮನನ್ನು ತನ್ನೊಡನೆ ಕಳುಹಿಸಿಕೊಡಬೇಕೆಂದು ತಿಳಿಸುವಾಗ ದಶರಥನನ್ನು ಸಮಾಧಾನಪಡಿಸಲು--

ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯ ಪರಾಕ್ರಮಮ್
ವಸಿಷ್ಠೋಽಪಿ ಮಹಾತೇಜಾ ಯೇ ಚೇಮೇ ತಪಸಿ ಸ್ಥಿತಾಃ

ಎಂದರೆ, 'ರಾಮನು ಪರಮ ಪುರುಷನೆಂಬುದನ್ನು ತಪೋನಿಷ್ಠನಾದ ನಾನು ಬಲ್ಲೆ; ಮಹಾ ತೇಜಸ್ವಿಯಾದ ವಸಿಷ್ಠನು ಬಲ್ಲನು; ಅಂತೆಯೇ ತಪೋನಿರತರಾದ ಇತರರು ಬಲ್ಲರು; ಕೇವಲ ಪುತ್ರಮೋಹದಿಂದ ನೀನು ಇವನನ್ನು ಅರಿಯಲಾರದಿರುವೆ' -- ಎಂದು ಅನೇಕ ವಿಧವಾಗಿ ಬೋಧಿಸಿದರೂ ದಶರಥನು 'ದುಃಖೇನೋತ್ಪಾದಿತಶ್ಚಾಯಂ ನ ರಾಮಂ ನೇತು ಮರ್ಹಸಿ' --ಎಂದು ಹೇಳುತ್ತ, ಕಡೆಗೆ ಕುಲ ಪುರೋಹಿತನಾದ ವಸಿಷ್ಠನ ಮಾತಿನಂತೆ ಬಹು ಕಷ್ಟದಿಂದ ಕಳುಹಿಸಲು ಒಪ್ಪುತ್ತಾನೆ. ಆದರೆ ಮಾತೆಯಾದ

ಕೌಸಲ್ಯೆಯು ಪುತ್ರವಾತ್ಸಲ್ಯದಿಂದ ಕೂಡಿದ್ದರೂ ಸಹ ರಾಮನನ್ನು ವಿಶ್ವಾಮಿತ್ರನೊಡನೆ ಕಳುಹಿಸಲು ತಡೆಯುವುದಿಲ್ಲ. ಈ ರೀತಿಯಾದ ಇವರಿಬ್ಬರ ತಾರತಮ್ಯವನ್ನು ಗಮನಿಸಿ -- "ಕೌಸಲ್ಯಾ ಸುಪ್ರಜಾ" ಎಂದು ಮುನಿಯು ಕರೆದಿರುವನು. ಇಂತಹ ಸುಪುತ್ರನಾದ ರಾಮನೇ! 'ಪೂರ್ವಾ ಸಂಧ್ಯಾ ಪ್ರವರ್ತತೇ' --ಎಂದರೆ ಪೂರ್ವಸಂಧ್ಯೆಯು ಸೂರ್ಯನನ್ನು ಉದಯಗೊಳಿಸಿದಂತೆ ನಿನ್ನ ಜನನಿಯಾದ ಕೌಸಲ್ಯೆಯು, ರಾಮ ದಿವಾಕರನಾದ ನಿನ್ನ ಆವಿರ್ಭಾವಕ್ಕೆ ಕಾರಣಳಾಗಿ ಧನ್ಯಳಾದಳೆಂದೂ, ಜನನಿಯನ್ನು ಸೇವಿಸುವಂತೆ ಪ್ರವರ್ತಿಸುತ್ತಿರುವ ಪೂರ್ವ ಸಂಧ್ಯೆಯ ಉಪಾಸನೆಯನ್ನು ಮಾಡು -- ಎಂದೂ, ಇದೋ ಸಹಸ್ರಾಂಶುವು ಉದಿಸುತ್ತಲೇ ಅಂಧಕಾರವನ್ನು ತೊಳೆದು ಹಾಕುತ್ತಿರುವನು; ಅದರಂತೆ ಜಗತ್ಕಂಟಕರಾದ ವಿರೋಧಿಗಳನ್ನು ನಿಗ್ರಹಿಸಲು ಇದು ಆರಂಭಕಾಲವೆಂದೂ, ಇಷ್ಟು ದೀರ್ಘಕಾಲದ ತಪಸ್ಸಿನ ಫಲವಾಗಿ ನಿನ್ನನ್ನು ಸಾಕ್ಷಾತ್ಕರಿಸಿಕೊಂಡ ನನ್ನ ಅಜ್ಞಾನಾಂಧಕಾರವು ತೊಲಗಿತು -- "ಸುಪ್ರಭಾತ"ವಾಯಿತೆಂದೂ, ಇಲ್ಲಿಯವರಿಗೆ ಪ್ರಪಂಚದಲ್ಲಿ ತಮೋಗುಣವು ಪ್ರಸರಿಸಿದ್ದು ರಾಮ ದಿವಾಕರನಾದ ನಿನ್ನ ಉದಯದಿಂದ ಸತ್ತ್ವೋದ್ರೇಕ ಕಾಲವು ಒದಗಿತೆಂದೂ -- ಇದರ ಅಭಿಪ್ರಾಯವನ್ನು ತಿಳಿಯಬಹುದು. 'ನರಶಾರ್ದೂಲ' --ಎಂಬುದರಿಂದ ಪುರುಷ ಶ್ರೇಷ್ಠನೆಂಬ ಅರ್ಥವು ಬರುತ್ತದೆ. ಪುರುಷ ಶ್ರೇಷ್ಠನಾದ ನೀನು ಕರ್ತವ್ಯದಲ್ಲಿ ಆಲಸನಾಗಿರಬಾರದು. ಏಕೆಂದರೆ ನೀನು ಆಲಸನಾದರೆ ಇತರರೂ ಅಲಸರಾಗುವರಲ್ಲವೇ!

ಯದ್ಯದಾಚರತಿ ಶ್ರೇಷ್ಠ ಸ್ತತ್ತ ದೇವೇತರೋ ಜನಃ
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ

--ಎಂಬಂತೆ ಶ್ರೇಷ್ಠನಾದವನು ಇತರರಿಗೆ ಆದರ್ಶಪ್ರಾಯನಾಗಿರಬೇಕೆಂಬುದೂ, ಮುಖ್ಯವಾಗಿ ಜಗದುಜ್ಜೀವನಕ್ಕಾಗಿಯೇ ಇರುವ ಶಾಸ್ತ್ರಮರ್ಯಾದೆಯನ್ನು ತೃಣೀಕರಿಸಿದ ಚೇತನರ ಮಧ್ಯೆ ಅವತರಿಸಿ ಯಾವನಾದರೊಬ್ಬ ರಾಜನು ತನ್ನ ಆಜ್ಞೆಯನ್ನು ಉಲ್ಲಂಘಿಸಿದ ವಿರೋಧಿಗಳನ್ನು ತಾನೇ ಉಪಾಯದಿಂದ ವಶೀಕರಿಸುವಂತೆ ಅವರನ್ನು ಕರ್ತವ್ಯಪರರನ್ನಾಗಿ ಮಾಡಬೇಕೆಂದೂ ತಿಳಿದು ಬರುತ್ತದೆ. 'ಕರ್ತವ್ಯಂ ದೈವಮಾಹ್ನಿಕಂ' --ಎಂಬುದರಿಂದ ಭಗವದಾಜ್ಞಾರೂಪವಾದ ನಿತ್ಯಕರ್ಮವು ಅಗತ್ಯವಾಗಿ ಮಾಡಲು ಯೋಗ್ಯವಾದುದೆಂದೂ, ಶ್ರೀರಾಮನು ಸಾಕ್ಷಾತ್ ಪರಮಾತ್ಮನಾದುದರಿಂದ ವಿಶ್ವಾಮಿತ್ರನು ತಾನು ಮಾಡುವ ಕರ್ಮವು ಭಗವದಾಜ್ಞಾ ರೂಪವಾಗಿಯೂ, ಭಗವತ್ ಕೈಂಕರ್ಯರೂಪವಾಗಿಯೂ ಇರುವುದರಿಂದ -- "ರಾಮ! ಏಳು; ಇದನ್ನು ಸ್ವೀಕರಿಸು" --ಎಂದು ರಾಮನಿಗೆ ನಿವೇದಿಸುವಂತೆಯೂ ವ್ಯಕ್ತವಾಗುತ್ತದೆ.

ಪರಮ ಮಂಗಳ ಸ್ವರೂಪನಾದ ಪರಮಾತ್ಮನನ್ನು ಸ್ವಾಭಿಮುಖನನ್ನಾಗಿ ಮಾಡಿಕೊಳ್ಳಲು ಭಕ್ತನು ಈ ರೀತಿ ಸಂಬೋಧಿಸಿ ಪ್ರಾರ್ಥಿಸುತ್ತಾನೆ--

ಉತ್ತಿಷ್ಠೋತ್ತಿಷ್ಠ ಗೋವಿಂದ ! ಉತ್ತಿಷ್ಠ ಗರುಡಧ್ವಜ !
ಉತ್ತಿಷ್ಠ ಕಮಲಾಕಾಂತ ! ತ್ರೈಲೋಕ್ಯಂ ಮಂಗಳಂ ಕುರು ೧

ಗೋವಿಂದನೇ ಏಳು; ಗರುಡಧ್ವಜನೇ ಏಳು; ಕಮಲಾಕಾಂತನೇ ಏಳು; ಮೂರು ಲೋಕಗಳನ್ನು ಮಂಗಳಯುತವಾಗಿ ಮಾಡು. ಇದು ಸಾಮಾನ್ಯವಾದ ಅರ್ಥ. ಇಲ್ಲಿ 'ಗೋವಿಂದ'-- ಎಂದು ಕರೆಯುವುದರಿಂದ ಪರಮಾತ್ಮನ ಆಶ್ರಿತರಲ್ಲಿರುವ ಸೌಲಭ್ಯವೂ, ಭಕ್ತರಲ್ಲಿರುವ ವಾತ್ಸಲ್ಯವೂ, ವ್ಯಕ್ತವಾಗುತ್ತವೆ. ಹೇಗೆಂದರೆ, ತಾನು ಸಕಲ ಕಲ್ಯಾಣಗುಣಪರಿಪೂರ್ಣನಾಗಿ, ಆಶ್ರಯಿಸುವ ಚೇತನರ ಇಂದ್ರಿಯಗಳಿಗೆ ಅಗೋಚರನಾದರೂ ಅವರಲ್ಲಿ ನಿರ್ಹೇತುಕವಾದ ಕೃಪೆಯಿಂದ ಒಂದುಕಾಲದಲ್ಲಿ ಚೇತನರ ಮಧ್ಯೆ ಶ್ರೀಕೃಷ್ಣನಾಗಿ ಅವತರಿಸಿದನು. 'ಗೋಪಾಲ' ನಾಗಿ ತನ್ನ ಸೌಲಭ್ಯವನ್ನು ತೋರಿಸಿಕೊಂಡನು. ಅಜ್ಞಾನಿಗಳಾದ ಜೀವಕೋಟಿಗಳಿಗೆ ತನ್ನ ಪರತತ್ತ್ವವನ್ನು ವ್ಯಕ್ತಪಡಿಸಲು ಬೃಂದಾವನದಲ್ಲಿ ಶಕ್ರ (ಇಂದ್ರ) ಪರಾಭವ ಮಾಡಿ, ಆತನಿಂದ 'ಗೋವಿಂದ' -- ಎಂದರೆ ಕೇವಲ ಗೋವುಗಳನ್ನು ರಕ್ಷಿಸಿ, ಅವುಗಳ ಇಂದ್ರನು ಮಾತ್ರವೇ ಅಲ್ಲ -- ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜಾಡ್ಯ ಮಾಂದ್ಯಾದಿ ದೋಷಗಳಿಂದ ಕೂಡಿದ ಸಮಸ್ತ ಚೇತನರಿಗೂ ತಾನು ಅಧಿಪತಿ -- ಎಂಬುದನ್ನು ಸ್ಪಷ್ಟಪಡಿಸಿದನು. 'ಗರುಡಧ್ವಜ'ನೆಂದು ಸಂಬೋಧಿಸುವುದರಿಂದ ಮಂಗಳ ಸ್ವರೂಪನೆಂಬುದು ವ್ಯಕ್ತವಾಗುತ್ತದೆ. 'ಮಂಗಳಂ ಭಗವಾನ್ ವಿಷ್ಣುಃ, ಮಂಗಳಂ ಗರುಡಧ್ವಜಃ' -- ಎಂದು ಹಿರಿಯರು ಸ್ತುತಿಸಿರುವುದು ಇದನ್ನು ಪುಷ್ಟೀಕರಿಸುತ್ತದೆ. ಸ್ವತಃ ಯಾವನು ಮಂಗಳಕರನೋ ಅವನೇ ತ್ರಿಲೋಕವನ್ನು ಮಂಗಳವನ್ನಾಗಿ ಮಾಡಲು ಸಮರ್ಥನೆಂಬುದನ್ನು ನಾವು ತಿಳಿಯಬಹುದು. "ಕಮಲಾಕಾಂತ" ಎಂದು ಪ್ರಬೋಧನಗೊಳಿಸುವುದರಿಂದ ಮಂಗಳಕರನಾದ ಪರಮಾತ್ಮನನ್ನು ಆಶ್ರಯಿಸಲು ಚೇತನರಿಗೆ 'ಪುರುಷಕಾರ' ಸ್ವರೂಪಳಾದ ಶ್ರೀದೇವಿಯು ಸಹಾಯಕಳೆಂದೂ, ಅಂತಹ ಶ್ರೀದೇವಿಯಿಂದ ಅವಿನಾಭೂತನಾದ ದೇವನೇ ಸುಲಭನೆಂದೂ ವಾಂಛಿತ ಫಲಪ್ರದಾತನೆಂದೂ ತಿಳಿದು ಬರುತ್ತದೆ. ಆದುದರಿಂದ, ಇಂತಹ ಮಂಗಳ ಸ್ವರೂಪನಾದ ದೇವನೇ! ಏಳು! ತ್ರಿಲೋಕವನ್ನು ಮಂಗಳಯುತವನ್ನಾಗಿ ಮಾಡು.

"ಸುಪ್ರಭಾತ" ಕೀರ್ತನದಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಅನುಕೂಲಿಸುವಂತೆ ಪುರುಷಕಾರ ಸ್ವರೂಪಳಾಗಿಯೂ, ಜಗನ್ಮಾತೆಯೂ ಆದ ಶ್ರೀದೇವಿಯನ್ನು ಸುಪ್ರಭಾತದಿಂದ ಭಕ್ತನು ಮೊದಲು ಪ್ರಾರ್ಥಿಸುತ್ತಾನೆ--

ಮಾತಸ್ಸಮಸ್ತಜಗತಾಂ ಮಧುಕೈಟಭಾರೇಃ
ವಕ್ಷೋವಿಹಾರಿಣಿ ಮನೋಹರದಿವ್ಯಮೂರ್ತೇ,
ಶ್ರೀ ಸ್ವಾಮಿನಿ ಶ್ರಿತ ಜನಪ್ರಿಯದಾನಶೀಲೇ
ಶ್ರೀ ವೇಂಕಟೇಶದಯಿತೇ ತವ ಸುಪ್ರಭಾತಮ್. ೨

ಸಮಸ್ತ ಲೋಕಗಳಿಗೂ ಮಾತೆಯೂ, ಮಧುಕೈಟಭರೆಂಬ ದಾನವರನ್ನು ಮರ್ದಿಸಿದ ದಾನವಾರಿಯ ಎದೆಯಲ್ಲಿ ವಿಹರಿಸುವವಳೂ, ಮನೋಹರ ದಿವ್ಯಸ್ವರೂಪವುಳ್ಳವಳೂ, ಆಶ್ರಿತರಿಗೆ ಪ್ರಿಯವಾದುದನ್ನು ಕೊಡುವ ಸ್ವಭಾವವುಳ್ಳವಳೂ, ಶ್ರೀ ವೇಂಕಟೇಶನ ಪ್ರಿಯತಮೆಯೂ ಆದ ಎಲೌ ಶ್ರೀದೇವಿ! ನಿನಗೆ ಸುಪ್ರಭಾತವು.

ಸಮಸ್ತ ಲೋಕಗಳಿಗೂ ಮಾತೆ -- ಎನ್ನುವುದರಿಂದ ಚೇತನರ ಇಷ್ಟಾರ್ಥಸಿದ್ಧಿಗೆ ಶ್ರೀದೇವಿಯು ಸಹಕಾರಿಣಿ (ಪುರುಷಕಾರ ಸ್ವರೂಪಗಳು), ಅಂದರೆ ಚೇತನರಪರವಾಗಿ ಪರಮಾತ್ಮನಲ್ಲಿ ಕರುಣೆಯನ್ನು ಉಂಟುಮಾಡುವವಳು -- ಎಂಬುದೂ, 'ಮಧುಕೈಟಭಾರಿಯ ವಕ್ಷೋವಿಹಾರಿಣಿ' ಎನ್ನುವುದರಿಂದ 'ಅನನ್ಯಾ ರಾಘವೇಣಾಽಹಂ ಭಾಸ್ಕರಸ್ಯ ಪ್ರಭಾ ಯಥಾ' -- ಎಂದರೆ ಸೂರ್ಯನನ್ನು ಬಿಟ್ಟು ಅವನ ಪ್ರಭೆಯು ಹೇಗೆ ಇರಲಾರದೋ ಹಾಗೆಯೇ ನಾನು. ಶ್ರೀರಾಮನನ್ನು ಬಿಟ್ಟಿರುವವಳಲ್ಲವೆಂದು ಸೀತಾದೇವಿಯು ಹೇಳಿರುವಂತೆ ಪುರುಷಕಾರಸ್ವರೂಪಳಾದ ಶ್ರೀದೇವಿಯೂ ಪರಮಾತ್ಮನನ್ನು ಎಂದಿಗೂ ಬಿಟ್ಟಿರುವುದಿಲ್ಲವೆಂದು ತಿಳಿಯುವುದರಿಂದ ಅಂತಹ ಶ್ರೀದೇವಿಯ ಪ್ರಸನ್ನತೆಯು ಚೇತನರ ಉಜ್ಜೀವನಕ್ಕೆ-- ಪರಮಾತ್ಮನ ಕೃಪೆಗೆ ಅತ್ಯಂತ ಸಹಕಾರಿ ಎಂಬುದೂ, 'ಮನೋಹರ ದಿವ್ಯರೂಪೇ, ಶ್ರಿತ ಜನಪ್ರಿಯ ದಾನಶೀಲೇ' -- ಎನ್ನುವುದರಿಂದ ಶಿಶುಗಳಲ್ಲಿ ವಾತ್ಸಲ್ಯವನ್ನು ಸೂಚಿಸುವ ಮಾತೆಯ ಅವ್ಯಾಜವಾದ ಕರುಣೆ ಮತ್ತು ಪ್ರೇಮರೂಪವಾದ ಜಗನ್ಮಾತೆಯ ಸ್ವರೂಪ ಸ್ವಭಾವ ಗುಣಗಳು ಭಾಸವಾಗುವುದರಿಂದ ಚೇತನರು ಜಗನ್ಮಾತೆಯನ್ನು ಆಶ್ರಯಿಸಿ, ತಮ್ಮ ಇಷ್ಟಸಿದ್ಧಿಯ ವಿಚಾರದಲ್ಲಿ ನಿಶ್ಚಿಂತರಾಗಿರಬಹುದೆಂಬುದೂ 'ಶ್ರೀಸ್ವಾಮಿನಿ' ಎನ್ನುವುದರಿಂದ 'ಶ್ರಯತೀತಿ ಶ್ರೀಃ', 'ಶ್ರೀಯತೇ ಇತಿ ಶ್ರೀಃ' ಎಂದರೆ ತಾನು ಚೇತನರ ಉಜ್ಜೀವನಕ್ಕಾಗಿ ಪರಮಾತ್ಮನನ್ನು ಆಶ್ರಯಿಸುವುದರಿಂದ 'ಶ್ರೀ' -- ಎಂದೂ, ಪರಮಾತ್ಮನಿಗಾಗಿ ಚೇತನರಿಂದ ತಾನು ಆಶ್ರಯಿಸಲ್ಪಡುವುದರಿಂದ 'ಶ್ರೀ' --ಎಂದೂ, ಕರೆಯಲ್ಪಡುವುದರಿಂದ ಅಂತಹ ಜಗನ್ಮಾತೆಯ ಅನುಗ್ರಹವು ಆತ್ಮೋದ್ಧಾರದ ಪರಿಪುಷ್ಟವಾದ ಉಪಾಯವೆಂಬುದೂ ಸ್ಪಷ್ಟವಾಗುತ್ತದೆ. ಆದುದರಿಂದ ಎಲೌ ಶ್ರೀದೇವಿ! ನಿನಗೆ ಸುಪ್ರಭಾತವಾಗಲಿ.

ತವ ಸುಪ್ರಭಾತಮರವಿಂದಲೋಚನೇ
ಭವತು ಪ್ರಸನ್ನಮುಖ ಚಂದ್ರಮಂಡಲೇ,
ವಿಧಿಶಂಕರೇಂದ್ರವನಿತಾಭಿರರ್ಚಿತೇ
ವೃಷಶೈಲನಾಥದಯಿತೇ ದಯಾನಿಧೇ. ೪

ಈ ಪದ್ಯದಲ್ಲಿಯೂ ಭಕ್ತನು ಶ್ರೀದೇವಿಯ ಗುಣಗಳನ್ನು ವರ್ಣಿಸುತ್ತಾ ಹೀಗೆ ಹೇಳುವನು. ಅರವಿಂದಲೋಚನಳೂ, ಚಂದ್ರಮಂಡಲದಂತಿರುವ ಪ್ರಸನ್ನವಾದ ಮುಖವುಳ್ಳವಳೂ, ಬ್ರಹ್ಮ, ಶಂಕರ, ಇಂದ್ರನೇ ಮೊದಲಾದವರ ಪತ್ನಿಯರಿಂದ ವಂದಿತಳೂ ವೃಷಶೈಲನಾಥನ (ಶ್ರೀ ವೇಂಕಟೇಶನ) ಪ್ರಿಯತಮೆಯೂ, ದಯಾನಿಧಿಯೂ ಆದ ಎಲೌ ಶ್ರೀದೇವಿಯೇ! ನಿನಗೆ ಸುಪ್ರಭಾತವಾಗಲಿ.

ಅತ್ರ್ಯಾದಿಸಪ್ತಋಷಯಸ್ಸಮುಪಾಸ್ಯ ಸಂಧ್ಯಾ--
ಮಾಕಾಶಸಿಂಧುಕಮಲಾನಿ ಮನೋಹರಾಣಿ,
ಆದಾಯ ಪಾದಯುಗಮರ್ಚಯಿತುಂ ಪ್ರಪನ್ನಾಃ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್.





ಜಗನ್ಮಾತೆಯಾದ ಶ್ರೀದೇವಿಯನ್ನು ಸುಪ್ರಭಾತದಿಂದ ಪ್ರಾರ್ಥಿಸಿ, ಇಲ್ಲಿಂದ ಮುಂದೆ ಶ್ರೀ ವೇಂಕಟೇಶನನ್ನು ಸುಪ್ರಭಾತದಿಂದ ಭಕ್ತನು ಪ್ರಾರ್ಥಿಸುತ್ತಾನೆ --

ಶೇಷಾದ್ರಿಗೆ ಶಿರೋಭೂಷಣನೂ, ಪ್ರಭುವೂ ಆದ ಎಲೈ ವೇಂಕಟೇಶನೇ! ಅತ್ರಿಯೇ ಮೊದಲಾದ ಸಪ್ತರ್ಷಿಗಳು ಪ್ರಾತಸ್ಸಂಧ್ಯೆಯ ಉಪಾಸನೆಯನ್ನು ಮಾಡಿ, ಮನೋಹರವಾದ ಆಕಾಶಗಂಗೆಯ ಕಮಲಗಳನ್ನು ತಂದು ನಿನ್ನ ಪಾದಯುಗ್ಮವನ್ನು ಅರ್ಚಿಸಲು ಬಂದಿರುವರು. ಆದ್ದರಿಂದ ನಿನಗೆ ಸುಪ್ರಭಾತವಾಗಲಿ.

ಪಂಚಾನನಾಬ್ಜಭವಷಣ್ಮುಖವಾಸವಾದ್ಯಾಃ
ತ್ರೈವಿಕ್ರಮಾದಿಚರಿತಂ ವಿಬುಧಾಃ ಸ್ತುವಂತಿ,

ಭಾಷಾಪತಿಃ ಪಠತಿ ವಾಸರಶುದ್ಧಿ ಮಾರಾತ್
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೬

ಶಂಕರ, ಬ್ರಹ್ಮ, ಷಣ್ಮುಖ, ಇಂದ್ರನೇ ಮೊದಲಾದ ದೇವತೆಗಳು ತ್ರಿವಿಕ್ರಮಾವತಾರದ ಕಥೆಯೇ ಮೊದಲಾದ ನಿನ್ನ ಚರಿತೆಯನ್ನು ಹಾಡಿಹೊಗಳುತ್ತಿದ್ದಾರೆ. ವಾಕ್ಪತಿಯಾದ ಬೃಹಸ್ಪತಿಯು ದಿನ ಶುದ್ಧಿಯನ್ನು ಈಗಲೆ ಪಠಿಸುತ್ತಿದ್ದಾನೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

ಈಷತ್ಪ್ರಫುಲ್ಲ ಸರಸೀರುಹನಾರಿಕೇಳ--
ಪೂಗದ್ರುಮಾದಿಸುಮನೋಹರಪಾಲಿಕಾನಾಮ್,
ಆವಾತಿ ಮಂದಮನಿಲಸ್ಸಹ ದಿವ್ಯಗಂಧ್ಯೈಃ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೭

ಈಗ ತಾನೆ ಸ್ವಲ್ಪಮಟ್ಟಿಗೆ ವಿಕಸಿತವಾಗಿರುವ ಕಮಲಗಳ, ತೆಂಗು ಮೊದಲಾದವುಗಳ ಸಂಪರ್ಕವನ್ನು ಹೊಂದಿ, ಸುಗಂಧ ಯುಕ್ತವಾದ ಮಾರುತವು ಮೆಲ್ಲಮೆಲ್ಲನೆ ಬೀಸುತ್ತಿದೆ. ಅಂದರೆ ಈಗತಾನೆ ಅರುಣೋದಯವಾಗುತ್ತಿದೆ. ಅದರ ಫಲವಾಗಿ ಹೂವುಗಳು ವಿಕಾಸಗೊಳ್ಳುತ್ತಿವೆ. ಅವುಗಳ ಮೇಲೆ ಹಾಯ್ದು ಬರುವ ಮಂದಮಾರುತವು ಹೊಸ ಚೈತನ್ಯವನ್ನುಂಟುಮಾಡುತ್ತಿದೆ; ಶೇಷಾದ್ರಿ ಶೇಖರವಿಭೋ! ನಿನಗೆ ಸುಪ್ರಭಾತವು.

ಉನ್ಮೀಲ್ಯ ನೇತ್ರಯುಗಮುತ್ತಮಪಂಜರಸ್ಥಾಃ
ಪಾತ್ರಾವಶಿಷ್ಟಕದಲೀಫಲಪಾಯಸಾನಿ,
ಭುಕ್ತ್ವಾ ಸಲೀಲಮಥ ಕೇಳಿಶುಕಾಃ ಪಠಂತಿ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೮

ಈಗತಾನೆ ಕಣ್ಣುಗಳನ್ನು ತೆರೆಯುತ್ತಿರುವ, ಪಂಜರದಲ್ಲಿ ವಿನೋದಾರ್ಥವಾಗಿ ಇರುವ ಗಿಳಿಗಳು ರಾತ್ರಿಯಲ್ಲಿ ಅವುಗಳ ಆಹಾರಕ್ಕಾಗಿ ಪಾತ್ರೆಗಳಲ್ಲಿ ಇಟ್ಟು ರಾತ್ರಿಯೇ ತಿಂದು ಉಳಿಸಿರುವ ಬಾಳೆಯಹಣ್ಣು ಪಾಯಸ ಮೊದಲಾದವನ್ನು ತಿಂದು ಸಂತೋಷದಿಂದ ಹಾಡುತ್ತಿವೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

ತಂತ್ರೀಪ್ರಕರ್ಷಮಧುರಸ್ವನಯಾ ವಿಪಂಚ್ಯಾ
ಗಾಯತ್ಯನಂತಚರಿತಂ ತವ ನಾರದೋಽಪಿ,
ಭಾಷಾಸಮಗ್ರಮಸಕೃತ್ಕರಚಾರರಮ್ಯಂ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೯

ದೇವರ್ಷಿಯಾದ ನಾರದನು ಶ್ರೇಷ್ಠವಾದ ತಂತಿಗಳಿರುವ ಮಧುರವಾದ ಧ್ವನಿಯನ್ನು ಕೊಡುವ 'ಮಹತಿ'ಯೆಂಬ ತನ್ನ ವೀಣೆಯನ್ನು ನುಡಿಸುತ್ತ ತನ್ನ ವೀಣಾವಾದನ ಚಮತ್ಕಾರವನ್ನು ತೋರಿಸುವ ಭಾಷೆಯಿಂದ ಸಮಗ್ರವಾದ ನಿನ್ನ ಚರಿತ್ರೆಯನ್ನು ಹಾಡುತ್ತಿರುವನು. ಶೇಷಾದ್ರಿ ಶೇಖರವಿಭೋ! ನಿನಗೆ ಸುಪ್ರಭಾತವು.

ಭೃಂಗಾವಲೀ ಚ ಮಕರಂದರಸಾನುವಿದ್ಧ--
ಝಂಕಾರಗೀತನಿನದೈ ಸ್ಸಹ ಸೇವನಾಯ,
ನಿರ್ಯಾತ್ಯುಪಾಂತಸರಸೀಕಮಲೋದರೇಭ್ಯಃ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೧೦

ಸಂಜೆಯ ಹೊತ್ತಿನಲ್ಲಿ ಪುಷ್ಪರಸವನ್ನು ಕುಡಿಯುತ್ತ ಕಮಲದೊಳಗೆ ಸೇರಿಹೋಗಿದ್ದ (ಸೂರ್ಯಾಸ್ತವಾಗಲು ಕಮಲವು ಮುಚ್ಚಿಕೊಳ್ಳುವುದರಿಂದ) ದುಂಬಿವಿಂಡು, ಈಗ ಸೂರ್ಯೋದಯವಾಗುತ್ತಿರಲು ಮಕರಂದ (ಪುಷ್ಪರಸ) ದೊಡನೆಯೇ ಝೇಂಕಾರ ರೂಪವಾದ ಗೀತಧ್ವನಿ ಗೈಯುತ್ತಾ ಕಮಲದ ಒಳಭಾಗದಿಂದ ನಿನ್ನ ಸೇವೆಗಾಗಿ ಇದೋ ಹೊರಬರುತ್ತಿವೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

ಯೋಷಾಗಣೇನ ವರದಧ್ನಿ ವಿಮಥ್ಯಮಾನೇ
ಘೋಷಾಲಯೇಷು ದಧಿಮಂಥನತೀವ್ರಘೋಷಾಃ,
ರೋಷಾತ್ಕಲಿಂ ವಿದಧತೇ ಕಕುಭಶ್ಚ ಕುಂಭಾಃ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೧೧

ಗೊಲ್ಲರ ಮನೆಗಳಲ್ಲಿ ಸ್ತ್ರೀಯರು ಹೆಪ್ಪು ಹಾಕಿದ ಗಟ್ಟಿ ಮೊಸರನ್ನು ಕಡೆಯುತ್ತಿದ್ದರೆ ಅದರಿಂದ ಉಂಟಾದ ಶಬ್ದದಿಂದಾಗಿ -- ಮೊಸರನ್ನು ಕಡೆಯುವ ಕುಂಭಗಳು; ದಿಕ್ಕುಗಳೊಡನೆ ಕೋಪದಿಂದ ಗುಡುಗಿ ಗರ್ಜಿಸುತ್ತಿರುವ ಭ್ರಾಂತಿಯನ್ನುಂಟುಮಾಡುತ್ತಿವೆ; ಪರಸ್ಪರ ಜಗಳವಾಡುತ್ತಿರುವಂತಿವೆ. ಎಂದರೆ, ಆಗ ತಾನೇ ಅರುಣೋದಯವಾಗುತ್ತಿರುವುದರಿಂದ ಎಲ್ಲೆಲ್ಲೂ ನಿಶ್ಶಬ್ದವು ಹರಡಿದೆ. ಅಂತಹ ಸಮಯದಲ್ಲಿ ಮೊಸರನ್ನು ಭಾರಿ ಭಾರಿ ಮಡಕೆಗಳಲ್ಲಿ ಕಡೆಯುವುದರಿಂದ ಅದರ ಶಬ್ದವು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿದೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

ಪದ್ಮೇಶಮಿತ್ರಶತಪತ್ರಗತಾಳಿವರ್ಗಾಃ
ಹರ್ತುಂ ಶ್ರಿಯಂ ಕುವಲಯಸ್ಯ ನಿಜಾಂಗಲಕ್ಷ್ಮ್ಯಾ
ಭೇರೀನಿನಾದಮಿವ ಬಿಭ್ರತಿ ತೀವ್ರನಾದಂ
ಶೇಷಾದ್ರಿಶೇಖರವಿಭೋ ! ತವ ಸುಪ್ರಭಾತಮ್. ೧೨

ಕಮಲದೊಳಗೆ ಸೇರಿದ್ದು ಹೊರಗೆ ಬರುತ್ತಿರುವ ದುಂಬಿಗಳ ಸಮೂಹಗಳು ತಮ್ಮ ದೇಹಕಾಂತಿಯಿಂದ ಕನ್ನೈದಿಲೆಯ ಶ್ರೀಯನ್ನು (ಐಶ್ವರ್ಯವನ್ನು ಮತ್ತು ಕಾಂತಿಯನ್ನು) ಅಪಹರಿಸಲು ರಣಭೇರಿಯಂತೆ ತೀವ್ರವಾಗಿ ಝೇಂಕರಿಸುತ್ತ ಹಾರಾಡುತ್ತಿರುತ್ತವೆ. ಬೆಳಗಾಗುತ್ತಲೇ ನೈದಿಲೆಯು ಮುಚ್ಚಿಕೊಳ್ಳುತ್ತದೆ; ಕಮಲವು ವಿಕಾಸಗೊಳ್ಳುತ್ತದೆ. ಅದರಿಂದ ಕಮಲದೊಳಗಿರುವ ದುಂಬಿಗಳು ಸ್ವಾಭಾವಿಕವಾದ ಕಪ್ಪುದೇಹದ ಕಾಂತಿಯಿಂದ ಮುಚ್ಚಿಹೋಗುತ್ತಲಿರುವ ನೈದಿಲೆಯನ್ನು (ಅದೂ ಕಪ್ಪಾಗಿರುವುದರಿಂದ) ಸೋಲಿಸಿ ಜಯಭೇರಿಯನ್ನು ಮೊಳಗಿಸುತ್ತಿವೆಯೋ ಎಂಬಂತಿವೆ. ಶೇಷಾದ್ರಿ ಶೇಖರ ವಿಭೋ! ನಿನಗೆ ಸುಪ್ರಭಾತವು.

ಶ್ರೀಮನ್ನಭೀಷ್ಟ ವರದಾಖಿಲಲೋಕಬಂಧೋ
ಶ್ರೀ ಶ್ರೀನಿವಾಸಜಗದೇಕದಯೈಕಸಿಂಧೋ,
ಶ್ರೀ ದೇವತಾಗೃಹಭುಜಾಂತರದಿವ್ಯಮೂರ್ತೇ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೧೩

ಶ್ರೀದೇವಿಯ ನಿತ್ಯಯೋಗವುಳ್ಳವನೂ, ಭಕ್ತರಿಗೆ ಅವರ ಇಷ್ಟ ಫಲ ಪ್ರದಾತನೂ, ಅಖಿಲಲೋಕ ಬಂಧುವೂ, ಜಗತ್ತಿಗೆ ಏಕಮಾತ್ರ ಕರುಣಾ ಸಮುದ್ರನೂ, ಶ್ರೀದೇವಿಗೆ ನಿತ್ಯವಾಸಸ್ಥಾನವಾದ ಎದೆಯುಳ್ಳವನೂ, ದಿವ್ಯಮಂಗಳ ಮೂರ್ತಿಯೂ, ಶ್ರೀ ವೇಂಕಟಾಚಲಾಧಿಪತಿಯೂ ಆದ ಶ್ರೀ ಶ್ರೀನಿವಾಸ! ನಿನಗೆ ಸುಪ್ರಭಾತವು. 'ಶ್ರೀದೇವತಾಗೃಹಭುಜಾಂತರ' -- ಎನ್ನುವುದರಿಂದ ಪರಾಶರ ಭಟ್ಟರು ಶ್ರೀಗುಣರತ್ನಕೋಶದಲ್ಲಿ -- 'ಯದ್ಭ್ರೂಭಂಗಾಃ ಪ್ರಮಾಣಂ ಸ್ಥಿರಚರ ರಚನಾತಾರತಮ್ಯೇ ಮುರಾರೇಃ, ವೇದಾಂತಾಸ್ತತ್ವಚಿಂತಾ ಮುರಭಿದುರಸಿ ಯತ್ಪಾದಚಿಹ್ನೈಸ್ತರಂತಿ' -- ಎಂದು ಹೇಳಿರುವಂತೆ -- ಎಂದರೆ, ಶ್ರೀಮನ್ನಾರಾಯಣನ ಸ್ಥಾವರ ಜಂಗಮಾತ್ಮಕವಾದ ಸೃಷ್ಟಿಯ ವೈಚಿತ್ರ್ಯದಲ್ಲಿ ಆತನ ವಕ್ಷಃಸ್ಥಲದಲ್ಲಿರುವ ಯಾವ ದೇವಿಯ ಭ್ರೂ (ಹುಬ್ಬು) ವಿಕ್ಷೇಪಗಳು ಪ್ರಮಾಣವಾಗಿರುತ್ತವೆಯೋ, ವೇದಾಂತಗಳು ಯಾವನ ವಕ್ಷಃಸ್ಥಲದಲ್ಲಿರುವ ಶ್ರೀದೇವಿಯ ಪಾದಚಿಹ್ನೆಗಳಿಂದ ಇದೇ ಪರತತ್ತ್ವವೆಂದು (ಶ್ರೀಮನ್ನಾರಾಯಣನೇ ಪರತತ್ತ್ವವೆಂದು) ನಿರ್ಣಯಿಸುವುವೋ -- ಅಂತಹ ಶ್ರೀದೇವಿ ಎಂದೂ, ಆ ಶ್ರೀದೇವಿಯ ನಿತ್ಯ ನಿವಾಸಸ್ಥಾನವಾದ ವಕ್ಷಃಸ್ಥಲವುಳ್ಳವನೆಂದೂ -- ಅಂದರೆ, ಪರಮಕಾರಣಿಕನಾದ ಪರವಾಸುದೇವನೇ ಜಗತ್ತಿನ ಕಲ್ಯಾಣಕ್ಕಾಗಿ ಶ್ರೀನಿವಾಸನಾಗಿ ನೆಲೆಸಿರುವನೆಂದೂ ವ್ಯಕ್ತವಾಗುವುದು.

ಶ್ರೀ ಸ್ವಾಮಿಪುಷ್ಕರಿಣಿಕಾಪ್ಲವನಿರ್ಮಲಾಂಗಾಃ
ಶ್ರೇಯೋಽರ್ಥಿನೋ ಹರವಿರಿಂಚಿ ಸನಂದನಾದ್ಯಾಃ,
ದ್ವಾರೇ ವಸನ್ತಿ ವರವೇತ್ರಹತೋತ್ತಮಾಂಗಾಃ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೧೪

ಶ್ರೀಸ್ವಾಮಿ ಪುಷ್ಕರಣೀ ತೀರ್ಥದಲ್ಲಿ ಸ್ನಾನಮಾಡಿ ಪರಿಶುದ್ಧರಾಗಿರುವ ಶಿವ, ಬ್ರಹ್ಮ ಸನಕ, ಸನಂದನರೇ ಮೊದಲಾದವರು ಶ್ರೇಯಃಕಾಂಕ್ಷಿಗಳಾಗಿ ನಾನು ಮೊದಲು ನಾನು ಮೊದಲೆಂದು ನಿನ್ನ ಬಾಗಿಲ ಬಳಿಗೆ ಬರುತ್ತಿರಲು ಅಲ್ಲಿನ ದ್ವಾರಪಾಲಕರು ತಮ್ಮ ಕೈಯಲ್ಲಿರುವ ಬೆತ್ತದಿಂದ ತಡೆಯುತ್ತಲಿರುವರು. ಅಂತಹ ಶ್ರೇಯೋಭಿಲಾಷಿಗಳಾದ ಹರಾದಿ ದೇವೋತ್ತಮರ ಗತಿಯೇ ಹೀಗಿರುವಾಗ ನಮ್ಮಂತಹರ ಗತಿಯೇನು? ಎಲೌ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

ಶ್ರೀ ಶೇಷಶೈಲ ಗರುಡಾಚಲ ವೇಂಕಟಾದ್ರಿ--
ನಾರಾಯಣಾದ್ರಿ ವೃಷಭಾದ್ರಿ ವೃಷಾದ್ರಿಮುಖ್ಯಾಮ್,
ಆಖ್ಯಾಂ ತ್ವದೀಯವಸತೇರನಿಶಂ ವದಂತಿ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೧೫

ಶ್ರೀ ವೇಂಕಟಾಚಲಪತೇ! ನಿನ್ನ ವಾಸಸ್ಥಾನವನ್ನು ಶ್ರೀಶೇಷಶೈಲವೆಂದೂ, ಗರುಡಾಚಲವೆಂದೂ, ವೇಂಕಟಾದ್ರಿ ಎಂದೂ, ನಾರಾಯಣಾದ್ರಿ ಎಂದೂ, ವೃಷಭಾದ್ರಿ ಎಂದೂ, ವೃಷಾದ್ರಿ ಎಂದೂ ಅನೇಕ ನಾಮಧೇಯಗಳಿಂದ ಕೀರ್ತಿಸುತ್ತಿರುವರು. ಅಂತಹ ಅನಂತ



ನಾಮಧೇಯಗಳಿಗೆ ಕಾರಣನಾದ ಮಹಾ ಮಹಿಮನೇ! ನಿನಗೆ ಸುಪ್ರಭಾತವು. ಈಗ ಯಾವ ಯಾವ ಕಾರಣಗಳಿಂದ ಬೇರೆ ಬೇರೆ ಹೆಸರುಗಳು ಬಂದಿವೆ ಎಂಬುದನ್ನು ನೋಡೋಣ. ಶ್ರೀನಿವಾಸನ ಸ್ಥಾನವಾದ ಗಿರಿಯು ಸರ್ಪಾಕೃತಿಯಿಂದ ಇರುವುದರಿಂದಲೂ, ಶ್ರೀನಿವಾಸನು ಭೂಲೋಕದಲ್ಲಿ ನೆಲೆಸುವುದನ್ನು ತಿಳಿದು ಅವನಿಗೆ "ಶೇಷ" ನಾದ ಶೇಷನೇ ಗಿರಿಯರೂಪವನ್ನು ತಾಳಿರುವನೆಂದು ಹೇಳುವುದರಿಂದಲೂ 'ಶೇಷಶೈಲ' --ವೆಂದೂ, ಶ್ರೀಶ್ವೇತವರಾಹಕಲ್ಪದಲ್ಲಿ ಭೂದೇವಿಯ ಉದ್ಧಾರಕ್ಕಾಗಿ ವರಾಹಮೂರ್ತಿಯು ಉದ್ಭವಿಸಿ ಲೋಕ ಕಲ್ಯಾಣಕ್ಕಾಗಿ ಇಲ್ಲಿಯೇ ನೆಲೆಸಬೇಕೆಂದು ಚಿಂತಿಸಿ, ವೈಕುಂಠದಲ್ಲಿರುವ ತನ್ನ ಕ್ರೀಡಾ ಪರ್ವತವನ್ನೇ ಭೂಲೋಕಕ್ಕೆ ತರಬೇಕೆಂದು ಗರುಡನಿಗೆ ಆಜ್ಞಾ

''ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ॥'' (7-7) ಇದರ ಸಾರವನ್ನು ಇಲ್ಲಿ ತೋರಿಸಿಕೊಟ್ಟಿರುತ್ತಾರೆ.

ಮತ್ತಃ ಪರತರಂ ನಾಸ್ತಿಯೆಂಬ ಕೃಷ್ಣ-
ನುಕ್ತಿಯ ನೋಡಿರೋ ಪುರು-
ಷೋತ್ತಮನು ತಾನೆಂಬ ಮತ್ತೊಂದು
ವಚನದರ್ಥವ ನೋಡಿರೋ ಸ।
ರ್ವೋತ್ತಮನು ಹರಿಯೆಂದು
ಮನಕೆ ತಂದುಕೊಳ್ಳಿರೋ
ಪಾರ್ಥನಿಗೆ ಹಯವದನ
ತೋರ್ದ ವಿಶ್ವರೂಪದಲಿ
ಸುತ್ತಮುತ್ತಿಹ ಸುರರ ತಲೆಯ
ನೋಡಿ ನಂಬಿರೋ ॥

ಗೋಪಾಲ ದಾಸರು ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಕುರಿತು ಸುಳಾದಿಯೊಂದರಲ್ಲಿ ಹೀಗೆ ವಿವರಣೆ ನೀಡಿರುವರು.

ಒಂದು ರೂಪದಿ ಪಾರ್ಥನಿಗೆ ತತ್ತ್ವ ತಿಳಿಸುತ್ತ
ಬಂದ ಅರಿಗಳ ಅಸ್ತ್ರಗಳ ತಾನೆ ಒರೆಸುತಲಿಪ್ಪ
ಒಂದು ರೂಪದಲಿ ಅರ್ಜುನನನ ಆಲಿಂಗಿಸಿ
ಬಂದ ಆಯಾಸಗಳ ಬಿಡಿಸುತ ನಿಂದಿಪ್ಪ
ಒಂದು ರೂಪದಿ ದೇವದತ್ತ ಶಂಖವನೂದಿ
ತಂದೀವ ಬಲವ ಪ್ರತಿಕ್ಷಣಕೆ ಪಾರ್ಥನಿಗಿನ್ನು
ಮಂದ ಅಸುರರಿಗೆ ಇದೆ ಶಬ್ದದಿಂದ ಅವರ
ಕುಂದು ಮಾಡುವ ಬಲವ
ಒಂದು ರೂಪದಲಿನ್ನು
ಒಂದೊಂದನಂತಾನಂತರೂಪನಾಗಿ
ಮುಂದರಿದ ಕುರುಸೈನ್ಯವ
ಕೊಂದು ಕೊಂದ್ಹಾಕುತಿಹ
ಮಂದಾಕಿನೀ ಜನಕ ಗೋಪಾಲವಿಠಲಹೀ
ಗೆಂದು ತಿಳಿದ ಚಪಗೆ ಬಂಧನವ ಕಡಿವ

ಇಲ್ಲಿ ''ಅನೇಕ ಬಾಹೂದರ ವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್'' (11-16) ಈ ಶ್ಲೋಕದ ಸಾರವನ್ನು ಸಂಗ್ರಹಿಸಿರುವುದನ್ನು ಕಾಣಬಹುದಾಗಿದೆ.

ವ್ಯಾಸರಾಯರು ತಮ್ಮ ''ವೃತ್ತನಾಮ'' ಹೆಸರಿನ ಪದ್ಯದಲ್ಲಿ ಇಡೀ ಭಗವದ್ಗೀತೆಯ ಸಾರವನ್ನು ಸಂಗ್ರಹ ಮಾಡಿರುವುದನ್ನು ನೆನಪಿಸಿಕೊಳ್ಳಬಹುದು.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ॥ (2-47) ಇದರ ಸಾರವನ್ನು ಹೀಗೆ ಸಂಗ್ರಹಿಸಿದ್ದಾರೆ.

ಕರ್ಮದಲ್ಲೇ ನಿನಗಧಿಕಾರ
ಫಲ ತಾ ದೂರ
ಧನಂಜಯಗೋಸ್ಕರ
ಜ್ಞಾನ ದೊಡ್ಡದು
XXXXXXXXXX
ವಿದ್ಯಾ ವಿನಯ ಸಂಪನ್ನೇ
ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವಪಾಕೇ ಚ
ಪಂಡಿತಾಃ ಸಮದರ್ಶಿನಃ (5-18)
ಅಜನಲ್ಲಿ ದ್ವಿಜನಲ್ಲಿ ಗಜನಲ್ಲಿ
ಸಮನಾನಲ್ಲಿ
ಭಜಿಪರಮನದಲ್ಲಿ

ಎಂಬುದಾಗಿ ಸಂಗ್ರಹಿಸಿದ್ದಾರೆ.

ಶ್ರೀಕೃಷ್ಣನು ತನ್ನ ವಿಭೂತಿ ರೂಪಗಳನ್ನು ವಿವರಿಸುತ್ತ-

ರಾಮಃ ಶಸ್ತ್ರಭೃತಾಮಹಂ
ನಕ್ಷತ್ರಾಣಾಮಹಂ ಶಶೀ
ಅಕ್ಷರಾಣಾಮಕಾರೋಽಸ್ಮಿ
ವೈನತೇಯಶ್ಚ ಪಕ್ಷಿಣಾಮ್

ಎಂದಿದ್ದಾನೆ. ವ್ಯಾಸರಾಯರು ಇದನ್ನು-

ರಾಮನಾನಯ್ಯ ರಾಜರ ಗುಂಪಿನಲ್ಲಿ
ಸೋಮ ನಾನಯ್ಯ ತಾರಕಮಂಡಲದಲ್ಲಿ
ಅಕ್ಷರದೊಳಗೆ ಅಕಾರನು
ಪಕ್ಷಿಗಳಲ್ಲಿ ನಾನು ಗರುಡನು
ಸಕಲ ಜಾತಿಗಳಲ್ಲಿ ಶ್ರೇಷ್ಠತನದಲ್ಲಿ
ಎನ್ನರೂಪ ತಿಳಿಯಲ್ಲಿ

-ಎಂಬುದಾಗಿ ವರ್ಣಿಸಿ ತಿಳಿಸಿಕೊಟ್ಟಿದ್ದಾರೆ.

ಹೀಗೆ ದಾಸಸಾಹಿತ್ಯದಲ್ಲಿ ಶ್ರೀಮದ್ ಭಗವದ್ಗೀತೆಯ ಅಮೃತಮಯಜ್ಞಾನ ಸಂದೇಶವನ್ನು ನಮ್ಮ ಹರಿದಾಸರು ವರ್ಣಿಸಿ ತಿಳಿಸಿಕೊಟ್ಟಿರುವರು. ಅವರ ಈ ಉಪಕಾರಕ್ಕೆ ನಾವು - ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಯಿ -ಎಂದು ಹೇಳಬೇಕಷ್ಟೇ!

★★★★★



ಮೂರ್ತಿಯೂ, ಅನಂತ ಗರುಡ ವಿಷ್ವಕ್ಸೇನರೇ ಮೊದಲಾದ ನಿತ್ಯಸೂರಿಗಳಿಂದ ಪೂಜಿಸಲ್ಪಟ್ಟ ಪಾದಪದ್ಮವುಳ್ಳವನೂ ಆದ ಶ್ರೀ ವೇಂಕಟಾಚಲಪತೇ!. ನಿನಗೆ ಸುಪ್ರಭಾತವಾಗಲಿ.

ಶ್ರೀ ಪದ್ಮನಾಭ ಪುರುಷೋತ್ತಮ ವಾಸುದೇವ
ವೈಕುಂಠ ಮಾಧವ ಜನಾರ್ದನ ಚಕ್ರಪಾಣೇ,
ಶ್ರೀವತ್ಸಚಿಹ್ನ ಶರಣಾಗತ ಪಾರಿಜಾತ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್ ೨೨

ಕಮಲವನ್ನು ನಾಭಿಯಲ್ಲಿ ಧರಿಸಿದವನೂ, ಪುರುಷರಲ್ಲಿ ಶ್ರೇಷ್ಠನೂ, ವಸುದೇವ ಪುತ್ರನಾದ ಶ್ರೀಕೃಷ್ಣನೂ, ಸರ್ವವ್ಯಾಪಿಯಾದ ವಾಸುದೇವ ಮೂರ್ತಿಯೂ, ವೈಕುಂಠನೂ, ಮಾಧವ (ಶ್ರಿಯಃಪತಿ)ನೂ, ಚಕ್ರಪಾಣಿಯೂ, ಶ್ರೀವತ್ಸದಿಂದ ಕೂಡಿದ ಅಂಕಿತ ವಕ್ಷಸ್ಥಲವುಳ್ಳವನೂ ಮೊರೆಹೊಕ್ಕವರಿಗೆ ಪಾರಿಜಾತವೂ (ಬೇಕಾದುದನ್ನು ಕೊಡುವ ಕಲ್ಪವೃಕ್ಷ) ಆದ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

ಕಂದರ್ಪದರ್ಪಹರ ಸುಂದರದಿವ್ಯಮೂರ್ತೇ
ಕಾಂತಾಕುಚಾಂಬುರುಹಕುಟ್ಮಲಲೋಲದೃಷ್ಟೇ,
ಕಲ್ಯಾಣನಿರ್ಮಲಗುಣಾಕರದಿವ್ಯಕೀರ್ತೇ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೨೩

ರೂಪದಲ್ಲಿ ಅಸದೃಶನೆನಿಸಿಕೊಂಡಿರುವ ಮನ್ಮಥನ ದರ್ಪವನ್ನು ಪುಡಿ ಪುಡಿ ಮಾಡುವಂತಹ ಅತಿಶಯಸುಂದರವೂ, ದಿವ್ಯವೂ ಮಂಗಳವೂ ಆದ ಮೂರ್ತಿಯುಳ್ಳವನೂ, ಕಾಂತೆಯಾದ ಶ್ರೀದೇವಿಯ ಕಮಲದ ಮೊಗ್ಗಿನಂತಹ ಕುಚಗಳಲ್ಲಿ ಆಸಕ್ತ ದೃಷ್ಟಿಯುಳ್ಳವನೂ, ಪರಿಶುದ್ಧವಾದ ಸಮಸ್ತ ಕಲ್ಯಾಣ ಗುಣಾಕರನೂ, ದಿವ್ಯ ಕೀರ್ತಿಯುಳ್ಳವನೂ ಆದ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

ಮೀನಾಕೃತೇ ! ಕಮಠ ! ಕೋಲ ! ನೃಸಿಂಹ ! ವರ್ಣಿನ್ !
ಸ್ವಾಮಿನ್ ಪರಶ್ವಥ ತಪೋಧನ ! ರಾಮಚಂದ್ರ !
ಶೇಷಾಂಶರಾಮ ! ಯದುನಂದನ ! ಕಲ್ಕಿರೂಪ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೨೪

ಪೀಡಿತರಾದ ಸಜ್ಜನರ ಮೊರೆಯನ್ನು ಕೇಳಿ, ಪರಮ ಕರುಣೆಯಿಂದ ಕೂಡಿ, ದುಷ್ಟ ಶಿಕ್ಷಣಕ್ಕಾಗಿಯೂ, ಶಿಷ್ಟ ಪರಿಪಾಲನೆಗಾಗಿಯೂ ಆಯಾ ಕಾಲಗಳಲ್ಲಿ ಮೀನಿನ ಆಕೃತಿಯುಳ್ಳವನಾಗಿಯೂ, (ವೇದೋದ್ಧಾರಕ್ಕಾಗಿ) ಆಮೆಯಾಗಿಯೂ, ವರಾಹಮೂರ್ತಿಯಾಗಿಯೂ, ಭಕ್ತವತ್ಸಲನಾದ ನರಸಿಂಹನಾಗಿಯೂ, ಬಲಿಭಂಜಕನಾದ ವಾಮನನಾಗಿಯೂ, ದುಷ್ಟಕ್ಷತ್ರಿಯ ದಮನನಾದ ಪರಶುರಾಮನಾಗಿಯೂ, ವಾಂಛಿತ ಫಲಪ್ರದಾತನಾದ ಶ್ರೀರಾಮಚಂದ್ರ ಮೂರ್ತಿಯಾಗಿಯೂ, ದುಷ್ಟರೆಂಬ ಗಜಗಳಿಗೆ ಸಿಂಹಪ್ರಾಯನಾದ ಶೇಷಾಂಶ ಸಂಭೂತನಾದ ಬಲರಾಮನಾಗಿಯೂ, 'ಪುಂಸಾಂ ಮೋಹನರೂಪ'ನಾದ ಶ್ರೀಕೃಷ್ಣನಾಗಿಯೂ, ಮುಂದೆ ಅವತರಿಸುವ ಮ್ಲೇಚ್ಛರನ್ನೂ ಮೂರ್ಛೆಗೊಳಿಸುವ ಕಲ್ಕಿ ರೂಪನಾಗಿಯೂ -- ಇನ್ನೂ ಅನೇಕ ರೂಪಗಳಲ್ಲಿ ಅವತರಿಸಿದವನೂ, ಅವತರಿಸುವವನೂ ಆಗಿರುವ ಶ್ರೀ ವೇಂಕಟಾಚಲಪತೇ ನಿನಗೆ ಸುಪ್ರಭಾತವು.



ಏಲಾಲವಂಗಘನಸಾರಸುಗಂಧಿತೀರ್ಥಂ
ದಿವ್ಯಂ ವಿಯತ್ಸರಿತಿ ಹೇಮಘಟೇಷು ಪೂರ್ಣಮ್,
ಧೃತ್ವಾದ್ಯ ವೈದಿಕಶಿಖಾಮಣಯಃ ಪ್ರಹೃಷ್ಟಾಃ
ತಿಷ್ಠನ್ತಿ ವೇಂಕಟಪತೇ ! ತವ ಸುಪ್ರಭಾತಮ್. ೨೫

ಏಲಕ್ಕಿ, ಲವಂಗ, ಪಚ್ಚಕರ್ಪೂರ, ಕೇಸರಿಯೇ ಮೊದಲಾದ ಪರಿಮಳ ದ್ರವ್ಯಗಳಿಂದ ಸುಗಂಧಯುಕ್ತವೂ ದಿವ್ಯವೂ ಆದ 'ಆಕಾಶಗಂಗೆ'ಯ ತೀರ್ಥವನ್ನು ಸುವರ್ಣ ಕುಂಭಗಳಲ್ಲಿ ತುಂಬಿಕೊಂಡು ಬಂದು, ವೈದಿಕ ಶ್ರೇಷ್ಠರು ಸಂತುಷ್ಟಚಿತ್ತರಾಗಿ ನಿನ್ನ ದಿವ್ಯ

ದರ್ಶನಕ್ಕಾಗಿ ಕಾದು ನಿಂತಿರುವರು. ಆದುದರಿಂದ ಶ್ರೀ ವೇಂಕಟಾಚಲಪತೇ ನಿನಗೆ ಸುಪ್ರಭಾತವು.

ಭಾಸ್ವಾನುದೇತಿ ವಿಕಚಾನಿ ಸರೋರುಹಾಣಿ
ಸಂಪೂರಯಂತಿ ನಿನದೈಃ ಕಕುಭೋ ವಿಹಂಗಾಃ,
ಶ್ರೀ ವೈಷ್ಣವಾಸ್ಸತತಮರ್ಥಿತ ಮಂಗಳಾಸ್ತೇ
ಧಾಮಾಶ್ರಯಂತಿ ತವ ವೇಂಕಟ ! ಸುಪ್ರಭಾತಮ್ ೨೬

ಸೂರ್ಯನು ಉದಿಸುತ್ತಿರುವನು; ಕಮಲಗಳು ವಿಕಾಸಗೊಳ್ಳುತ್ತಿರುವುವು; ಪಕ್ಷಿಗಳು ಕಲ ಕಲ ಮಧುರವಾದ ತಮ್ಮ ಧ್ವನಿಗಳಿಂದ ದಿಕ್ಕುಗಳನ್ನು ಮೊಳಗಿಸುತ್ತಿರುವುವು; ಶ್ರೀವೈಷ್ಣವರೂ ಒಂದೇ ಸಮವಾಗಿ ಮಂಗಳಾಶಾಸನ ಗೈಯುತ್ತ ನಿನ್ನ ಸೇವಾಕಾಂಕ್ಷಿಗಳಾಗಿ ಆಲಯದ ಸುವರ್ಣ ದ್ವಾರದಲ್ಲಿ ನಿಂತಿರುವರು. ಓ! ಶ್ರೀನಿವಾಸ ನಿನಗೆ ಸುಪ್ರಭಾತವು.

ಬ್ರಹ್ಮಾದಯಸ್ಸುರವರಾಸ್ಸಮಹರ್ಷಯಸ್ತೇ
ಸಂತಸ್ಸನಂದನ ಮುಖಾಸ್ತ್ವಥ ಯೋಗಿವರ್ಯಾಃ,
ಧಾಮಾಂತಿಕೇ ತವ ಹಿ ಮಂಗಳವಸ್ತುಹಸ್ತಾಃ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೨೭

ಬ್ರಹ್ಮನೇ ಮೊದಲಾದ ದೇವಶ್ರೇಷ್ಠರೂ, ಪ್ರಸಿದ್ಧರಾದ ಮಹರ್ಷಿಗಳೂ, ಸನಕಸನಂದನಾದಿ ಯೋಗಿಗಳೂ ನಿನ್ನ ಆಲಯದ ಸಮೀಪದಲ್ಲಿ ಮಂಗಳ ದ್ರವ್ಯಗಳನ್ನು ತಂದು ನಿನ್ನ ಸೇವಾಕಾಂಕ್ಷಿಗಳಾಗಿ ನಿಂತಿರುವರು. ಶ್ರೀ ವೇಂಕಟಾಲಪತೇ! ನಿನಗೆ ಸುಪ್ರಭಾತವು.

ಲಕ್ಷ್ಮೀನಿವಾಸ ನಿರವದ್ಯ ಗುಣೈಕಸಿಂಧೋ
ಸಂಸಾರಸಾಗರಸಮುತ್ತರಣೈಕಸೇತೋ,
ವೇದಾಂತವೇದ್ಯ ನಿಜವೈಭವ ಭಕ್ತಭೋಗ್ಯ
ಶ್ರೀ ವೇಂಕಟಾಚಲಪತೇ ! ತವ ಸುಪ್ರಭಾತಮ್. ೨೮

ಲಕ್ಷ್ಮಿಗೆ ನಿತ್ಯವಾಸಸ್ಥಾನವಾಗಿಯೂ, ನಿತ್ಯವೂ ನಿರ್ದುಷ್ಟವೂ ಆದ ಸಮಸ್ತ ಕಲ್ಯಾಣ ಗುಣಗಳಿಗೆ ಆಕರನೂ, ಪ್ರಪಂಚವೆಂಬ ಮಹಾ ಸಾಗರವನ್ನು ದಾಟುವುದರಲ್ಲಿ ಅದ್ವಿತೀಯವಾದ ಸೇತುವೆಯೂ, ವೇದಾಂತಗಳಿಂದ ತಿಳಿಯಲ್ಪಡುವ ವೈಭವವುಳ್ಳವನೂ, ಭಕ್ತರಿಗೆ ಭೋಗ್ಯನೂ ಆಗಿರುವ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

ಇತ್ಥಂ ವೃಷಾಚಲಪತೇರಿಹ ಸುಪ್ರಭಾತಂ
ಯೇ ಮಾನವಾಃ ಪ್ರತಿದಿನಂ ಪಠಿತುಂ ಪ್ರವೃತ್ತಾಃ,
ತೇಷಾಂ ಪ್ರಭಾತಸಮಯೇ ಸ್ಮೃತಿರಂಗಭಾಜಾಂ
ಪ್ರಜ್ಞಾಂ ಪರಾರ್ಥಸುಲಭಾಂ ಪರಮಾಂ ಪ್ರಸೂತೇ. ೨೯

ಶ್ರೀ ವೇಂಕಟಾಚಲಾಧೀಶನ ಇಂತಹ ಸುಪ್ರಭಾತ ಸ್ತೋತ್ರವನ್ನು ನೆನಪಿನಲ್ಲಿಟ್ಟುಕೊಂಡು ಪ್ರತಿದಿನವೂ ಬೆಳಗಿನ ಕಾಲದಲ್ಲಿ ಯಾರು ಪಠಿಸುವ ಅಭ್ಯಾಸವಿಟ್ಟುಕೊಳ್ಳುವರೋ ಅವರಿಗೆ ಶ್ರೀ ವೇಂಕಟೇಶನು ಪರಮ ಪವಿತ್ರವೂ, ಪರವಿದ್ಯೆ (ವೇದಾಂತ ವಿದ್ಯೆ)ಯ ಅರ್ಥವನ್ನು ತಿಳಿಸುವುದರಲ್ಲಿ ಸುಲಭವೂ, ಆದ ಪ್ರಜ್ಞೆಯನ್ನು ಅತಿಶಯವಾಗಿ ಕರುಣಿಸುತ್ತಾನೆ.

ಇಂತು ಶ್ರೀ ವೇಂಕಟೇಶ
ಸುಪ್ರಭಾತವು ಮುಗಿಯಿತು.





# ತಿಲಕರ ಅಭಿಮತದಲ್ಲಿ
# ಜ್ಞಾನ ಭಕ್ತಿ ಕರ್ಮ ಯೋಗಗಳು

---ಡಾ|| ರಾ.ನ. ಅರಳೀಕಟ್ಟಿ.

## ೀತೆಯ ಮಹತ್ವ :

ಭಗವದ್ಗೀತೆಯು ಹೊಳೆಯುವ ಭಾರತೀಯ ರ್ಮಗ್ರಂಥರತ್ನಗಳಲ್ಲಿ ಮುಕುಟರತ್ನವೆಂದೇ ಹೇಳ ಟ್ಟಿದ್ದು. ಮಹಾಭಾರತದಲ್ಲಿಯ ಭೀಷ್ಮಪರ್ವ ಲ್ಲಿ ಬರುವ ಭಗವದ್ಗೀತೆಯು "ಸಕಲ ವರ್ಣ ವರಿಗೆ ಎಲ್ಲ ಪ್ರಸಂಗದಲ್ಲಿಯೂ ಉಪಯುಕ್ತ ಾದ ಆತ್ಮಶ್ರೇಯಸ್ಕರವಾದ ಗ್ರಂಥವಾಗಿದೆ." ಈ ಂಥದಲ್ಲಿ ಹೇಳಿದ ವಿಷಯವೇ ಬೇರೆಕಡೆಗೆ ೇಳಿದೆ. ಇಲ್ಲಿ ಹೇಳದೇ ಇದ್ದದ್ದು ಬೇರಾವ ಡೆಗೂ ಹೇಳಿಲ್ಲ. ಮಹಾಭಾರತದ ಬಗ್ಗೆ ಹೇಳಿರುವ ಾತನ್ನು ಇಲ್ಲಿ ಸ್ಮರಿಸಬಹುದು. ಶ್ರೀ ಮನ್ಮಧ್ವಾಚಾ ರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ೇಳಿದಂತೆ ಮಹಾಭಾರತ ಗ್ರಂಥವು ಬಹಳ ಮಹ ದ್ದು ಮತ್ತು ಭಾರವಾದದ್ದು. ಆದರೆ ಗೀತೆಯು ಕಾರದಲ್ಲಿ ಚಿಕ್ಕದಾದರೂ ಸಕಲ ಶಾಸ್ತ್ರಗಳ ಸಾರ ೂತವಾದ ಗ್ರಂಥವೆಂದೇ ಹೇಳಬಹುದು. ಗೀತೆ ಯನ್ನು ಸರಿಯಾಗಿ ತಿಳಿದುಕೊಂಡು ಓದಿದ್ದಾದರೆ ಾಕು. ಇನ್ನುಳಿದ ಶಾಸ್ತ್ರ ಅಧ್ಯಯನದಿಂದ ಏನು ಪ್ರಯೋಜನ? "ಭಗವದ್ಗೀತೆಯನ್ನು ಸ್ವಲ್ಪ ಓದಿ ದರೂ ಸಾಕು" ಎಂಬುವ ಮಹಾನುಭಾವರ ನುಡಿ ಳು ಗೀತೆಯ ಮಹತ್ವವನ್ನು ಎತ್ತಿ ತೋರಿಸುತ್ತವೆ. ೀತೆ ಎಂದರೆ ಒಂದು ರತ್ನವಿದ್ದಂತೆ. ಯಾವ ರೀತಿ ಯಲ್ಲಿ ಕೋಹಿನೂರು ರತ್ನವನ್ನು ಇಲ್ಲಿಂದ ಇಂಗ್ಲೆಂ ಡಿಗೆ ಒಯ್ದು ಮೇಲೆ ಹೆಚ್ಚು ಹೆಚ್ಚು ಕೆತ್ತಿಸಿದಂತೆ ಅದರ ಹೊಳಪುಸೊಬಗು ಹೆಚ್ಚೆಚ್ಚು ಆದಂತೆ ಮತ್ತು ಶ್ರೀಗಂ ಧವನ್ನು ಹೆಚ್ಚು ತೇಯ್ದಂತೆ ಅದರ ಪರಿಮಳ ಹೆಚ್ಚು ತ್ತದೆಯೋ ಅದೇ ರೀತಿಯಾಗಿ ಈ ಭಗವದ್ಗೀತೆಯ ವಿಶ್ಲೇಷಣೆ ಬೇರೆ ಬೇರೆ ರೀತಿಯಲ್ಲಿ ಆದಂತೆ ಅದರ ಹಿರಿಮೆ ಇನ್ನೂ ಹೆಚ್ಚಾಗುತ್ತ ಹೋಗುತ್ತಿದೆ.

## ಪ್ರಸ್ಥಾನ ತ್ರಯಿ ಮತ್ತು ಗೀತೆ :

ಭಾರತೀಯ ದರ್ಶನ ಶಾಸ್ತ್ರದ ಮೂರು ಪ್ರಧಾನ ಗ್ರಂಥಗಳು ಅಂದರೆ ಪ್ರಸ್ಥಾನ ತ್ರಯಿ. ಅವು ಯಾವ ವೆಂದರೆ ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆ, ಆಧ್ಯಾತ್ಮಚಿಂತನ ಪರವಾದ ಉಪನಿ ಷತ್ತುಗಳಲ್ಲಿ ಪರಮಾತ್ಮನ ಬಗ್ಗೆ ನಿರ್ಗುಣಪರವಾಗಿ ಮತ್ತು ಸಗುಣಪರವಾಗಿ ವಿಚಾರಗಳಿವೆ. ಅವು ಗಳನ್ನು ಸಮನ್ವಯಗೊಳಿಸಿ ಒಂದೇ ದಾರದಲ್ಲಿ ಪೋಣಿಸಿದಂತೆ ಇರುವುದು ಬ್ರಹ್ಮಸೂತ್ರಗ್ರಂಥ, ಗೀತೆ ಯಲ್ಲಿ ಪ್ರವೃತ್ತಿ ಪರವಾದ ಕರ್ಮಯೋಗವನ್ನು ಪ್ರತಿ ಪಾದಿಸಲಾಗಿದೆ. ಜ್ಞಾನದ ಮೂಲಕ, ಭಕ್ತಿ ಪ್ರಧಾ ನವಾದ ಕರ್ಮಯೋಗವನ್ನು ಇಲ್ಲಿ ಪ್ರಧಾನವಾಗಿ ಹೇಳಲಾಗಿದೆ. ಆದ್ದರಿಂದಲೇ ಪ್ರತಿ ಅಧ್ಯಾಯದ ಕೊನೆಗೆ "ಶ್ರೀಮದ್ಭಗವದ್ಗೀತಾಸು ಉಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೆ" ಈ ಸಂಕಲ್ಪ ಮಂತ್ರವನ್ನು ಮತ್ತೆ ಮತ್ತೆ ಹೇಳಲಾಗಿದೆ. ಉಪ ನಿಷತ್ತುಗಳಲ್ಲಿ ಹೇಳಿದ ಜ್ಞಾನವನ್ನೇ ಮೂಲಾ ಧಾರವಾಗಿ ಗೀತೆಯನ್ನು ಹೇಳಲಾಗಿದೆ ಎಂಬು ದಕ್ಕೆ "ಭಗವದ್ಗೀತಾ" ಎನ್ನುವ ಪದವೇ ಸಾಕ್ಷಿ. "ಶ್ರೀಮದ್ಭಗವದ್ಗೀತಾಸು ಉಪನಿಷತ್ಸು" ಎಂಬ ಪ್ರತಿ ಅಧ್ಯಾಯದ ಕೊನೆಗೆ ಹೇಳಿದ ಸಂಕಲ್ಪಮಂತ್ರದಲ್ಲಿ ಗೀತೆಗೂ ಮತ್ತು ಉಪನಿಷತ್ತುಗಳಿಗೂ ಇರುವ ಅವಿ ನಾಭಾವ ಸಂಬಂಧವು ವ್ಯಕ್ತವಾಗುತ್ತದೆ. ಆದ್ದ ರಿಂದಲೇ "ಭಾರತಂ, ಭಾಗವತಂ" ಮೊದಲಾದ ಗ್ರಂಥಗಳಂತೆ ಇಲ್ಲಿ ಭಗವದ್ಗೀತಂ ಎಂದು ಹೇಳ ಲಿಲ್ಲ. ಯಾಕೆಂದರೆ ಉಪನಿಷತ್ ಪದವು ಸಂಸ್ಕೃ ತದಲ್ಲಿ ಸ್ತ್ರೀಲಿಂಗ ಪದವಾದ್ದರಿಂದ ಅದಕ್ಕೆ ಸಂಬಂಧ ಪಟ್ಟ ಗ್ರಂಥವೆಂದು ಗೀತಾ ಎಂಬ ಪದವು ಸ್ತ್ರೀಲಿಂ ಗದಲ್ಲಿಯೇ ಬಳಸಲಾಗಿದೆ. ಸರ್ವೋಪನಿಷದೋ ಗಾವೋ -- ಎಂಬ ಶ್ಲೋಕದಲ್ಲಿ ಉಪನಿಷತ್ತುಗಳೆಂ ದರೆ ಆಕಳು ಅವುಗಳ ಅಮೃತಕರ ಹಾಲು ಎಂದರೆ ಗೀತೆ ಎಂಬ ಮಾತಿನಲ್ಲಿ ಗೀತೆ ಮತ್ತು ಉಪನಿಷತ್ತು ಗಳ ಸಂಬಂಧವನ್ನೂ ಸ್ಪಷ್ಟಪಡಿಸಲಾಗಿದೆ.

## ಗೀತೆಯ ತಾತ್ಪರ್ಯ :

ಗೀತೆಯ ತಾತ್ಪರ್ಯವನ್ನು ಕುರಿತು ಸಾಂಪ್ರದಾ ಯಿಕ ಆಚಾರ್ಯರಲ್ಲಿ ಅವರವರ ತತ್ವಗಳಂತೆ ಮತ ಭೇದ ಇರುವುದು ಸ್ವಾಭಾವಿಕ. ಯಾಕೆಂದರೆ ಪ್ರತಿ ಯೊಬ್ಬ ಆಚಾರ್ಯರೂ ಜೀವ, ಜಗತ್ತು, ಈಶ್ವರ, ಇವರುಗಳ ಸಂಬಂಧದ ಬಗ್ಗೆ ಗೀತೆಯ ತಮ್ಮದೇ ತತ್ವವನ್ನು ಹೇಳುತ್ತದೆ ಎಂದು ಪ್ರತಿಪಾದಿಸುತ್ತಾರೆ. ಜ್ಞಾನ ಪ್ರಧಾನ ಸಂಪ್ರದಾಯದವರು ಜ್ಞಾನಯೋ ಗವೇ ಪ್ರಧಾನವೆಂದು, ಭಕ್ತಿ ಪ್ರಧಾನ ಸಂಪ್ರದಾ ಯದವರು ಭಕ್ತಿಯೋಗವೇ ಮುಖ್ಯವೆಂದು, ಮತ್ತು ಪ್ರವೃತ್ತಿ ಪರ ಮಾರ್ಗದವರು, ಹಲವಾರು ಆಧುನಿಕ ವಿಮರ್ಶಕರು ಕರ್ಮಯೋಗವೇ ಪ್ರಧಾನವೆಂದು ಹೇಳುತ್ತಾರೆ. ಹೀಗೆ, ಗೋದಿ, ಸಕ್ಕರೆ, ತುಪ್ಪ ಇವುಗಳಿಂದ ಕೂಡಿದ, ಮಿಠಾಯಿಯನ್ನು ಕೆಲವರು, ಗೋದಿ, ಪ್ರಧಾನವೆಂದು, ಕೆಲವರು, ಸಕ್ಕರೆ ಪ್ರಧಾ



ನವೆಂದು, ಇನ್ನು ಕೆಲವರು ತುಪ್ಪ ಪ್ರಧಾನವೆಂದು ಹೇಳಿದರೆ, ಒಂದು ದೃಷ್ಟಿಯಿಂದ ತಪ್ಪಾಗಲಾರದು ಹಾಗೆಯೇ ಗೀತೆಯು ಕೂಡ, ಜ್ಞಾನ ಭಕ್ತಿ ಮತ್ತು ಕರ್ಮಗಳ ಪ್ರಾಧಾನ್ಯದ ತಾರತಮ್ಯವನ್ನು ಪ್ರತಿಪಾದಿಸುತ್ತದೆ. ಭಾಗವತ ದಶಮಸ್ಕಂದದಲ್ಲಿ ಕಂಸನ ವಧೆಗೆ ಬಂದಿರುವ ಕೃಷ್ಣನನ್ನು ಸಭಾಮಂಟಪದಲ್ಲಿ ಇರುವಂತಹ ಮಲ್ಲರು ವಜ್ರದಂತೆ, ಸ್ತ್ರೀಯರು ಕಾಮನಂತೆ, ತಂದೆ ತಾಯಿಗಳು ಮಗನಂತೆ ಕಂಡರಂತೆ, ಅದರಂತೆಯೇ ಗೀತೆಯ ಬಗ್ಗೆ ಕೂಡ ಜ್ಞಾನ, ಭಕ್ತಿ, ಕರ್ಮಗಳ ಪ್ರಾಧಾನ್ಯದ ಬಗ್ಗೆ ಭಿನ್ನಾಭಿಪ್ರಾಯವಿರುವುದು ಅಸ್ವಾಭಾವಿಕವಾಗಿರುವುದಿಲ್ಲ.

## ಆಧುನಿಕರ ದೃಷ್ಟಿ :

ನಾವು ಗೀತೆಯನ್ನು ಕೇವಲ ಸಾಂಪ್ರದಾಯಿಕ ದೃಷ್ಟಿಯಿಂದ ನೋಡದೇ ಅದರ ತಾತ್ಪರ್ಯನಿರ್ಣಯವನ್ನು ಶಾಸ್ತ್ರೀಯ ದೃಷ್ಟಿಯಿಂದ ಮೀಮಾಂಸಕರ ಆರು ತತ್ವಗಳಿಗನುಗುಣವಾಗಿ, ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ, ಈ ಒರೆಗಲ್ಲುಗಳ ಮೇಲೆ ಪರೀಕ್ಷಿಸಿ ನೋಡಿದಾಗ ಗೀತೆಯು ಪ್ರವೃತ್ತಿಪಾರವಾದ ಕರ್ಮಯೋಗವನ್ನೇ ಪ್ರಧಾನವಾಗಿ ಹೇಳುವಂತಹ ಗ್ರಂಥ ಎಂದು ಲೋಕಮಾನ್ಯರು ತಿಲಕರು ತಮ್ಮ ಗೀತಾ ರಹಸ್ಯದಲ್ಲಿ ಮನದಟ್ಟಾಗುವಂತೆ ಪ್ರತಿಪಾದಿಸಿದ್ದಾರೆ. ಈ ನಿಲುಮೆಗೆ ಪೋಷಕವಾಗಿ ಸಾಕಷ್ಟು ಪ್ರಮಾಣಗಳನ್ನು ಮಹಾಭಾರತ, ಭಾಗವತ, ಪುರಾಣಾದಿಗ್ರಂಥಗಳಿಂದ ಆಯ್ದುಕೊಂಡು ಎತ್ತಿ ತೋರಿಸಿದ್ದಾರೆ. "ಪ್ರವೃತ್ತಿ ಲಕ್ಷಣಂ ಧರ್ಮಂ, ಋಷಿರ್ನಾರಾಯಣೋಽಬ್ರವೀತ್" (ಮ. ಭಾ.), "ಪ್ರವೃತ್ತಿ ಲಕ್ಷಣೋ ಯೋಗಃ ಜ್ಞಾನಂ ಸನ್ಯಾಸ ಲಕ್ಷಣಮ್", "ಪ್ರವೃತ್ತಿ ಲಕ್ಷಣಶ್ಚೈವ ಧರ್ಮೋ ನಾರಾಯಣಾತ್ಮಕಃ" (ಮ. ಭಾ.), "ಭಾಗವತಂ ನಿಷ್ಕಾಮ ಪ್ರವೃತ್ತಿ ಪರಂ" (ಭಾ. 138).

## ಅರ್ಜುನನ ಸಮಸ್ಯೆ :

ಗೀತೆಯ ಪ್ರಾರಂಭವು ಕೂಡ ಕರ್ತವ್ಯಾಕರ್ತವ್ಯಗಳ ಧರ್ಮಾಧರ್ಮಗಳ ಕತ್ತರಿಯಲ್ಲಿ ಸಿಕ್ಕು ಏನೂ ತೋಚದೇ ಅಜ್ಞಾನದಿಂದ ಸಂಮೂಢನಾದ ಅರ್ಜುನನ ಸಮಸ್ಯೆಯಾಗಿದೆ. ಅಂದರೆ ಇಂತಹ ಧರ್ಮಸಂಕಟದಲ್ಲಿ ಸಿಕ್ಕಿರುವ ಕರ್ಮಾಕರ್ಮ ಸಂಶಯ ಗ್ರಸ್ತನಾದ ಸಾಮಾನ್ಯ ಮಾನವನ ಸಮಸ್ಯೆಯಾಗಿದೆ. ಬುದ್ಧಿ ಭ್ರಮೆಯಾಗಿ ಮನ ಸ್ಫೋಟವಾಗುವ ಮನಸ್ಸಿನ ರೋಗ. ಈ ಮನೋರೋಗಕ್ಕೆ ಚಿಕಿತ್ಸೆ ಮಾಡುವಂತಹ ಮನೋರೋಗ ವೈದ್ಯನ ಅವಶ್ಯಕತೆ ಇವೆ. ಅಂತಹ ವೈದ್ಯನೆಂದರೆ ಭಗವಾನ್ ಶ್ರೀಕೃಷ್ಣನೇ ಸರಿ. ವಿಶ್ವಸಾಹಿತ್ಯದಲ್ಲಿ ಇಂತಹ ಪ್ರಸಂಗಗಳ ಚಿತ್ರಣವನ್ನು ಕವಿಗಳು, ನಾಟಕಕಾರರೂ ಮಾಡಿದ್ದಾರೆ. ಉದಾ -- ಸುಪ್ರಸಿದ್ಧ ನಾಟಕಕಾರಣದ ಶೇಕ್ಸ್‌ಪಿಯರನು ತನ್ನ ವಿಖ್ಯಾತ ಶೋಕಾಂತ ಇಂಗ್ಲೀಷ ನಾಟಕ "ಹ್ಯಾಮ್ಲೆಟ್"ದಲ್ಲಿ ಇಂತಹ ಪ್ರಸಂಗವನ್ನು ಬಣ್ಣಿಸಿದ್ದ ನಾಯಕನಾದ ಹ್ಯಾಮ್ಲೆಟನಿಗೆ ತಾನು ಜೀವಿಸಬೇಕೇ ಅಥವಾ ಮರಣ ಹೊಂದಬೇಕೆ ಎನ್ನುವ ಅತ್ಯಂತ ಪ್ರಕ್ಷುಬ್ಧ ಮನೋವಸ್ಥೆಯಲ್ಲಿ ಸೂಕ್ತ ಸಲಹೆ ನೀಡಲು ಅರ್ಜುನನಿಗೆ ದೊರಕಿದಂತಹ, ಶ್ರೀಕೃಷ್ಣಸಮಾನ ಸಲಹೆಗಾರ ಸಿಗದೆ ಇದ್ದ ಕಾರಣ ಅವನು ಮರಣವನ್ನು ಅಪ್ಪಿಕೊಳ್ಳಬೇಕಾಯಿತು. ಇಂತಹ ಪ್ರಸಂಗದ ಬೇರೆ ಬೇರೆ ಸಾಹಿತ್ಯದಲ್ಲಿ ಕೂಡ ಚಿತ್ರಿಸಲಾಗಿವೆ. ಗೀತೆಯ ಸಂದರ್ಭದಲ್ಲಿ ಹೇಳಬೇಕಾದರೆ ಅರ್ಜುನನ ಸಮಸ್ಯೆಯೆಂದರೆ, "ಒಂದೆಡೆಗೆ ನಾನು ತಂದೆ, ತಾಯಿ, ಗುರು, ಬಾಂಧವರೊಡನೆ ಯುದ್ಧಮಾಡಿ ಇವರನ್ನು ಕೊಂದು ಕುಲಕ್ಷಯ ಮಾಡಿದ ಘೋರ ಪಾಪಕ್ಕೆ ಗುರಿಯಾಗಿ ಆತ್ಮಶ್ರೇಯಸ್ಸಿನಿಂದ ವಂಚಿತನಾಗಬೇಕೇ ಅಥವಾ ವೀರ ಕ್ಷತ್ರಿಯನಾದ ನಾನು ಕ್ಷಾತ್ರ ಧರ್ಮದ ಪ್ರಕಾರ ನನ್ನ ಕರ್ತವ್ಯವಾದ ಯುದ್ಧವನ್ನು ಮಾಡಬೇಕೆ -- ಇದಾವುದೂ ನನಗೆ ಸರಿಯಾಗಿ ತಿಳಿಯದಂತೆ ಆಗಿದೆ. ಈ ಆಪ್ತಜನರನ್ನು ಕೊಂದು ರಕ್ತಸಿಕ್ತವಾದ ರಾಜ್ಯವನ್ನು ಉಪಭೋಗಿಸುವುದಕ್ಕಿಂತ ಭಿಕ್ಷೆಬೇಡಿ ಸಂನ್ಯಾಸ ವೃತ್ತಿಯಲ್ಲಿ ಬದುಕುವುದೇ ಒಳಿತು" -- ಇದೇ ಅರ್ಜುನನ ಅಭಿಪ್ರಾಯವಾಗಿತ್ತು. ಅವನಿಗೆ ಆತ್ಮ ಕಲ್ಯಾಣದ ಮಾರ್ಗ ಯಾವುದು ಎಂಬುದು ತಿಳಿಯದಂತಾಗಿತ್ತು. ಆದ್ದರಿಂದ ಅವನ ಶರೀರ, ಮನಸ್ಸು, ಬುದ್ಧಿಗಳು ನಿಷ್ಕ್ರಿಯವಾಗಿ, ಬುದ್ಧಿ ಭ್ರಮೆಗೆ, ಮನಸ್ಸು ಕ್ಷೋಭೆಗೆ, ಶರೀರವು ಕಂಪನಾದಿ ವಿಕಾರಗಳಿಗೆ ತುತ್ತಾಗಿದ್ದವು. ಇಂತಹ ಮನಸ್ಸಿನ ಅವಸ್ಥೆಯಲ್ಲಿ, ಮನೋರೋಗಿಯ ರೋಗವನ್ನು ತಿಳಿದುಕೊಂಡು, ರೋಗಚಿಕಿತ್ಸಕನಾದ ಭಗವಾನ್ ಶ್ರೀಕೃಷ್ಣನು ಅರ್ಜುನನಲ್ಲಿ, ಅವನ ಕ್ಷಾತ್ರ ಕರ್ತವ್ಯದಲ್ಲಿ ಪ್ರೇರೇಪಿಸಲು ಗೀತೆಯ ಉಪದೇಶವನ್ನು ಮಾಡಿ ಕರ್ಮರೋಗ ಶಾಸ್ತ್ರದ ರಹಸ್ಯವನ್ನು ತಿಳಿಸಿದನು. ಕೇವಲ ಸನ್ಯಾಸ ಪ್ರಧಾನವಾಗಿ ಜ್ಞಾನಮಾರ್ಗದ ಉಪದೇಶಕ್ಕಾಗಲೀ ಅಥವಾ ಕೇವಲ ಪಾತಂಜಲಿಯೋಗ ಶಾಸ್ತ್ರವನ್ನು ಹೇಳುವುದಕ್ಕಾಗಲೀ ಅಥವಾ ಕೇವಲ ಭಕ್ತಿಯ ಮಹಾತ್ಮೆಯನ್ನೇ ಬಣ್ಣಿಸುವುದಕ್ಕಾಗಲೀ ಶ್ರೀಕೃಷ್ಣನು ಗೀತೆಯ ಉಪದೇಶವನ್ನು ಮಾಡಲಿಲ್ಲ. ಆದರೆ ಕರ್ತವ್ಯಮೂಢನಾದ ವಿಮನಸ್ಕ ಮತ್ತು ವಿರಕ್ತನಾದ ಅರ್ಜುನನಿಗೆ ಮಾಡಬೇಕಾದ ಕರ್ತವ್ಯ ಏನು ಎಂಬುದನ್ನು ಇಡೀ ಕರ್ತವ್ಯಶಾಸ್ತ್ರದ ಸಿದ್ಧಾಂತ ನೀಡಿ ಶಾಸ್ತ್ರಗಳನ್ನೇ ಕರ್ಮಯೋಗಶಾಸ್ತ್ರದ ರಹಸ್ಯ ಎಂದು ವಿವರಿಸಿದ್ದಾನೆ. ಉಪಕ್ರಮದಲ್ಲಿ ಚಿತ್ರಿಸಿದ ಈ ಸಮಸ್ಯೆಗೆ ಉಪಸಂಹಾರದಲ್ಲಿ ಪರಿಹಾರವನ್ನು ಕಲ್ಪಿಸಿ ಉಪಕ್ರಮೋಪಸಂಹಾರಗಳಲ್ಲಿ ಏಕ ವಾಕ್ಯತೆಯನ್ನು ತೋರಿಸಲಾಗಿದೆ. ಮತ್ತು ಆಗಾಗ್ಗೆ "ಆದ್ದರಿಂದ ಯುದ್ಧ ಮಾಡು" ತಸ್ಮಾತ್ ಯುಧ್ಯಸ್ವ, ತಸ್ಮಾತ್ ಉತ್ತಿಷ್ಠ, ತಸ್ಮಾತ್ ಅಸಕ್ತಃ ಸತತಂ ಕಾರ್ಯಂಕರ್ಮ ಸಮಾಚರ" -- ಈ ಕರ್ಮ ಯೋಗದ ರಹಸ್ಯವನ್ನೇ ಮೇಲಿಂದ ಮೇಲೆ ಯುಕ್ತಿಯುಕ್ತವಾಗಿ ತಿಳಿಸಿ ಕೊನೆಗೆ ಅರ್ಜುನನ ಮುಖದಿಂದಲೇ "ನಿನ್ನ ದಯೆಯಿಂದ ಎಲ್ಲ

ವನ್ನು ತಿಳಿದುಕೊಂಡೆನು, ನನ್ನ ಮೋಹ ದೂರವಾಯಿತು. ನೀನು ಹೇಳಿದಂತೆ, ನನ್ನ ಇಚ್ಛೆಯಿಂದ ನಾನು ಯುದ್ಧಮಾಡಲು ಸಿದ್ಧನಾಗಿದ್ದೇನೆ" ಎಂದು ಹೇಳಿಸಿದ್ದಾನೆ. ಶ್ರೀಕೃಷ್ಣನ ಉಪದೇಶ ಅರ್ಜುನನಿಗೆ ಮನದಟ್ಟಾಗಿದೆ ಎಂಬುದಕ್ಕೆ ಈ ವಾಕ್ಯವೇ ಪ್ರಮಾಣವಾಗಿ --ಈ ಮಾತುಗಳಿಂದ ಗ್ರಂಥ ಪರೀಕ್ಷಣದ ಮೇಲೆ ಹೇಳಿದ ಆರು ಒರೆಗಲ್ಲುಗಳಿಗೆ ಕರ್ಮಯೋಗವೇ ಪ್ರಧಾನ ಎಂದು ಗೀತಾ ರಹಸ್ಯದಲ್ಲಿ ಹೇಳಿ ಕ್ಷಾತ್ರ ಧರ್ಮ ಪ್ರವೃತ್ತಿಗೆ ಮೂಲಭೂತಜ್ಞಾನವನ್ನು, ಅದರ ಪುಷ್ಟಿಗಾಗಿ ಭಕ್ತಿಯನ್ನೂ ಪ್ರತಿಪಾದಿಸಲಾಗಿದೆ. ಮೂರೂ ಯೋಗಗಳನ್ನು ಹಾಸುಹೊಕ್ಕಾಗಿ ವೇದ ಪುರುಷನ ತಲೆ ಮತ್ತು ಎರಡು ಕೈಗಳಂತೆ ಸಮನ್ವಯ ಗೊಳಿಸಲಾಗಿದೆ.

## ಎರಡನೆಯ ಅಧ್ಯಾಯದಲ್ಲಿಯ ತತ್ವ ವಿವೇಚನೆ :

ಅರ್ಜುನ ವಿಷಾದಯೋಗ ಎಂಬ ಮೊದಲನೆಯ ಅಧ್ಯಾಯದಲ್ಲಿ ಕರ್ತವ್ಯ ಮೂಢನಾದ, ಖಿನ್ನನಾದ ಅರ್ಜುನನು ಧನುಷ್ಯ ಬಾಣಗಳನ್ನು ಬೀಸಿ ಒಗೆದು ಸುಮ್ಮನೆ ಹೇಡಿಯಂತೆ ಕುಳಿತದ್ದು ಕಂಡು ಶ್ರೀಕೃಷ್ಣನು ಮುಗುಳುನಗೆ ನಕ್ಕು ಹೇಳಿದನು. 'ಎಲೇ ಅರ್ಜುನನೇ ಸಾಂಖ್ಯಮಾರ್ಗದ ದೊಡ್ಡ ದೊಡ್ಡ ಜಾಣತನದ ಮಾತುಗಳನ್ನು ಹೇಳುತ್ತಿರುವಿಯಲ್ಲಾ? ನೀನು ನಿಜವಾಗಿಯೂ ಜ್ಞಾನಮಾರ್ಗದ ತತ್ವಗಳನ್ನು ತಿಳಿದುಕೊಂಡಂತೆ ಕಾಣುವುದಿಲ್ಲ. ಎಂದು ಎರಡನೆಯ ಅಧ್ಯಾಯದಲ್ಲಿ ಪ್ರಾರಂಭಿಸಿ ೩೯ ಶ್ಲೋಕದ ವರೆಗೆ ಸಾಂಖ್ಯ ಅಥವಾ ಜ್ಞಾನದಮಾರ್ಗದ ತತ್ವಗಳನ್ನು ತಿಳಿಸಿ ಹೇಳುತ್ತಾನೆ. ತರುವಾಯ ಕೊನೆಯ ವರೆಗೆ ಕರ್ಮಯೋಗದ ರಹಸ್ಯವನ್ನು ತಿಳಿಸುತ್ತಾನೆ. ಇಡೀ ಗೀತೆಯಲ್ಲಿ ಕೂಡ ಬ್ರಹ್ಮವಿದ್ಯಾಂತರ್ಗತವಾದ ಈ ಕರ್ಮಯೋಗ ಶಾಸ್ತ್ರವನ್ನೇ ಹೇಳಲಾಗಿದೆ -- ಎಂದು ತಿಲಕರು ತಮ್ಮ ಗೀತಾರಹಸ್ಯದಲ್ಲಿ ಪ್ರತಿಪಾದಿಸಿದ್ದಾರೆ. ಮೊಟ್ಟಮೊದಲು ಅರ್ಜುನನ ಹೇಡಿತನವನ್ನು ಅವನ ಮನಸ್ಸಿನ ನಿರುತ್ಸಾಹವನ್ನು ಕಂಡು ಶ್ರೀಕೃಷ್ಣನು ಅರ್ಜುನನಿಗೆ "ನಿನ್ನಂತಹ ಶೂರನಿಗೆ ಈ ಹೇಡಿತನ ಒಪ್ಪುವುದಿಲ್ಲ, ಇದನ್ನು ತೊರೆ ಏಳು, ಯುದ್ಧಮಾಡು" ಎಂದು ಹೇಳಿದನು. ಜ್ಞಾನಿಯಂತೆ ವ್ಯವಹರಿಸಲು ಇಚ್ಛಿಸುತ್ತಿದ್ದ ಮತ್ತು ಕರ್ಮ ಸನ್ಯಾಸದ ದೊಡ್ಡಸ್ತಿಕೆಯನ್ನು ಹೇಳಲಾರಂಭಿಸಿದ ಅರ್ಜುನನಿಗೆ ಭಗವಂತನು ಅಶೋಚಾನನ್ವ ಶೋಚಸ್ತ್ವ ಎಂಬ ಶ್ಲೋಕದಿಂದ ಆರಂಭಿಸಿ ಸಾಂಖ್ಯಮಾರ್ಗದಂತೆ ಕೂಡ ನೀನು ಯುದ್ಧಮಾಡುವದೇ ಶ್ರೇಯಸ್ಕರ ಎಂದು ತಿಳಿಸಿದ್ದಾರೆ. ಜಗತ್ತಿನಲ್ಲಿ ಕರ್ಮ ಬಿಡುವುದು ಮತ್ತು ಕರ್ಮಮಾಡುವುದು ಎಂಬ ಎರಡು ಮಾರ್ಗಗಳು ಕಂಡು ಬರುತ್ತವೆ. ಈ ಎರಡರಲ್ಲಿ ಯಾವುದನ್ನು ನೀನು ಸ್ವೀಕರಿಸಿದರೂ ನೀನು ತಪ್ಪು ದಾರಿಯಲ್ಲಿ ಹೋಗುತ್ತಿರುವಿ ಎಂದು ಸ್ಪಷ್ಟ ಪಡಿಸಿದ್ದಾನೆ. ಕರ್ಮಯೋಗ ಮಾರ್ಗಕ್ಕನುಗುಣವಾಗಿ ಯುದ್ಧಮಾಡುವುದೇ ಅವನ ನಿಜವಾದ ಕರ್ತವ್ಯವೆಂದು ಹೇಳಿದ್ದಾನೆ. ಸಂಕ್ಷೇಪದಲ್ಲಿ ಹೇಳಬೇಕೆಂದರೆ ಚಿತ್ತ ಶುದ್ಧಿಗಾಗಿ, ಸ್ವಧರ್ಮಕ್ಕನುಗುಣವಾಗಿ, ವರ್ಣಾಶ್ರಮ ವಿಹಿತ ಕರ್ಮಗಳನ್ನು ಮಾಡಿ ಜ್ಞಾನ ಪ್ರಾಪ್ತಿಯಾದಮೇಲೆ ಮೋಕ್ಷಕ್ಕಾಗಿ ಎಲ್ಲ ಕರ್ಮಗಳನ್ನು ಬಿಟ್ಟು ಸಂನ್ಯಾಸವನ್ನು ಸ್ವೀಕರಿಸುವುದೇ ಜ್ಞಾನ ಮಾರ್ಗ ಅಥವಾ ಸಾಂಖ್ಯಮಾರ್ಗ ಮತ್ತು ಜ್ಞಾನೋತ್ತರ ಕೂಡ ಕರ್ಮಗಳನ್ನು ಯಾವಾಗಲೂ ಫಲಾಶೆ ಇಲ್ಲದೆ ನಿಷ್ಕಾಮ ಬುದ್ಧಿಯಿಂದಲೇ ಮಾಡುತ್ತಿರುವುದು ಕರ್ಮಯೋಗಮಾರ್ಗ ಎಂದು ವಿವರಿಸಲಾಗಿದೆ.

ಸಾಂಖ್ಯಮಾರ್ಗದ ಅಧ್ಯಾತ್ಮತತ್ವಗಳಂತೆ, ಆತ್ಮನು ಅವಿನಾಶಿ ಮತ್ತು ಅಮರನಾಗಿದ್ದು, ಭೀಷ್ಮದ್ರೋಣಾದಿ ಮೊದಲಾದವರನ್ನು ನಾನು ಕೊಲ್ಲುವೆನು ಎಂಬುದು ನಿನ್ನ ತಪ್ಪು ತಿಳುವಳಿಕೆಯಾಗಿದೆ, ಯಾಕೆಂದರೆ ಆತ್ಮನು ಸಾಯುವವನೂ ಅಲ್ಲ, ಕೊಲ್ಲುವವನೂ ಅಲ್ಲ. ಹೇಗೆ ಮನುಷ್ಯ ತನ್ನ ಹಳೆಯ ಬಟ್ಟೆಗಳನ್ನು ಬಿಚ್ಚಿಹಾಕಿ ಹೊಸಬಟ್ಟೆಗಳನ್ನು ಧರಿಸುವನೋ ಹಾಗೆ ಆತ್ಮನು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಪ್ರವೇಶಿಸುವನು. ದೇಹ ಯಾವಾಗಲೂ ನಶ್ವರ ಮತ್ತು ಅನಿತ್ಯ, ಆದ್ದರಿಂದ ಯಾವುದೇ ಒಬ್ಬ ಮನುಷ್ಯ ಮರಣ ಹೊಂದಿದನು ಎಂದು ಶೋಕ ಮಾಡುವುದು ಸರಿಯಲ್ಲ ಎಂದು ಶ್ರೀಕೃಷ್ಣನು, ಅರ್ಜುನನಿಗೆ ಸಾಂಖ್ಯತತ್ವದ ಸಾರವನ್ನು ತಿಳಿಸಿದ್ದಾನೆ. ಈ ಜ್ಞಾನಮಾರ್ಗದ ತತ್ವವನ್ನು ತಿಳಿದುಕೊಂಡಮೇಲೆ ಯುದ್ಧ ಏಕೆ ಮಾಡಬೇಕೆಂಬ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು "ಕ್ಷತ್ರಿಯನಿಗೆ ಶಾಸ್ತ್ರ ಪ್ರಾಪ್ತವಾದ ಯುದ್ಧದಿಂದ ಹಿಂಜರಿಯುವುದು ಸರಿಯಾದದಲ್ಲ. ಸಾಂಖ್ಯಮಾರ್ಗದನುಗುಣವಾಗಿಯೂ ವರ್ಣಾಶ್ರಮ ವಿಹಿತ ಕರ್ಮವನ್ನು ನೀನು ಮಾಡದೇ ಇದ್ದರೆ ಜನರು ನಿನಗೆ ಹೆಸರಿಡುವರು. ಯುದ್ಧದಲ್ಲಿ ಮರಣಹೊಂದುವುದೇ ಕ್ಷತ್ರಿಯನ ಕರ್ತವ್ಯವಾಗಿದೆ. ಆದ್ದರಿಂದ ನೀನು ಶೋಕ ಮಾಡುವುದು ಉಚಿತವಲ್ಲ. ಕೊಲ್ಲುವವ, ಸಾಯುವವ, ಎಂಬ ಕೇವಲ ಕರ್ಮದೃಷ್ಟಿಯನ್ನು ಬಿಟ್ಟು ನಾನು, ನನ್ನ ಸ್ವಧರ್ಮವನ್ನು ಆಚರಿಸುತ್ತಿದ್ದೇನೆ -- ಈ ಬುದ್ಧಿಯಿಂದ ನೀನು ಕಾರ್ಯಗಳನ್ನು ಮಾಡು. ಅದರಿಂದ ನಿನಗೆ ಯಾವ ಪಾಪವೂ ಅಂಟಿಕೊಳ್ಳುವುದಿಲ್ಲ, ಎಂದು ಮೊದಲಾಗಿ ಉತ್ತರಿಸಿದ್ದಾನೆ.

ಚಿತ್ತಶುದ್ಧಿಗಾಗಿ ಕರ್ಮಗಳನ್ನು ಮಾಡಿ ಚಿತ್ತಶುದ್ಧಿಯಾದ ಮೇಲೆ ಕರ್ಮಗಳನ್ನು ಬಿಡುವುದೇ ಶ್ರೇಷ್ಠವಾದರೆ ವಿರಕ್ತಿಯಾದನಂತರ ಯುದ್ಧಮಾಡದೇ ಸನ್ಯಾಸವನ್ನೇಕೆ ತೆಗೆದುಕೊಳ್ಳಬಾರದು ಎಂಬ ಅರ್ಜುನನ ಮನಸ್ಸಿನಲ್ಲಿ ಇದ್ದ ಶಂಕೆಗೆ ಸಮಾಧಾನವಾಗಿ ಕರ್ಮಯೋಗದ ರಹಸ್ಯವನ್ನು ಅಧ್ಯಾಯದ ಕೊನೆಯವರೆಗೆ ವಿವರಿಸಿದ್ದಾನೆ. ಕರ್ಮಗಳನ್ನು ಮಾಡಲೇಬೇಕು. ಅವುಗಳನ್ನು ಮಾಡುತ್ತಿರುವಾಗಲೇ ಹೇಗೆ ಮೋಕ್ಷವನ್ನು ಪಡೆಯಬಹುದೆಂಬುದನ್ನು ಬೇರೆ ಬೇರೆ ಉದಾಹರಣೆಗಳನ್ನು ಕೊಟ್ಟು ಪ್ರಮಾಣಗಳನ್ನು ತೋರಿಸಿ ಶ್ರೀಕೃಷ್ಣನು ವಿವರಿಸಿದ್ದಾನೆ. ಯಾವುದೇ ಕರ್ಮ -- ಒಳ್ಳೆಯದು, ಕೆಟ್ಟದ್ದು ಎಂದು ನಿರ್ಧರಿಸಬೇಕಾದರೆ ಆ ಕರ್ಮದ ಬಾಹ್ಯ ಪರಿಣಾಮಕಿಂತಲೂ, ಕರ್ಮ ಮಾಡುವವನ ವಾಸನಾತ್ಮಕ ಬುದ್ಧಿ ಎಷ್ಟರ ಮಟ್ಟಿಗೆ ಶುದ್ಧ ಅಥವಾ ಅಶುದ್ಧವಿರುವುದೆಂದು ಮೊಟ್ಟಮೊದಲು ವಿಚಾರಿಸಬೇಕಾಗುತ್ತದೆ. ಕರ್ಮಯೋಗದಲ್ಲಿ ಇದೇ ಮುಖ್ಯವಾದ ತತ್ವ. ವಾಸನಾತ್ಮಕ ಬುದ್ಧಿಯ ಶುದ್ಧ -- ಅಶುದ್ಧತೆಯ ನಿರ್ಣಯಕೂಡ ಕೊನೆಗೆ ವ್ಯವಸಾಯಾತ್ಮಕ ಬುದ್ಧಿಯು ಮಾಡಬೇಕಾಗುತ್ತದೆ. ಈ ರೀತಿಯಾಗಿ, ಒಳ್ಳೆಯದು ಮತ್ತು ಕೆಟ್ಟದನ್ನು ಆರಿಸುವ ಬುದ್ಧಿ, ಇಂದ್ರಿಯಗಳು ಸ್ಥಿರವಾಗದ ಹೊರತು ವಾಸನಾತ್ಮಕ ಬುದ್ಧಿ ಶುದ್ಧವಾಗಲೀ ಸಮವಾಗಲೀ ಆಗುವುದಿಲ್ಲ. ಅದು ಶುದ್ಧವಾಗಬೇಕಾದರೆ ವ್ಯವಸಾಯಾತ್ಮಕ ಬುದ್ಧಿ ಇಂದ್ರಿಯಗಳನ್ನು ಸಮಾಧಿಯಿಂದ ಸ್ಥಿರಮಾಡಬೇಕಾಗುವುದು. ಸಾಮಾನ್ಯವಾಗಿ ಜಗತ್ತಿನ ಎಲ್ಲ ವ್ಯವಹಾರಗಳನ್ನು ನೋಡಿದಾಗ ಬಹುಶಃ ಎಲ್ಲರೂ ಪೂರ್ವಮೀಮಾಂಸಕರು ಹೇಳಿದಂತೆ, ಸ್ವರ್ಗಾದಿಕಾಮ್ಯ ಸುಖಕ್ಕಾಗಿಯೇ ಯಜ್ಞಯಾಗಾದಿ ವೈದಿಕ ಕರ್ಮಗಳಲ್ಲಿ ತೊಡಗಿರುತ್ತಾರೆ. ಆದ್ದರಿಂದ ಅಂಥವರ ಬುದ್ಧಿಯು, ಇಂದು ಈ ಫಲವನ್ನು, ನಾಳೆ ಇನ್ನೊಂದು ಫಲವನ್ನು ಪಡೆಯುವುದರಲ್ಲಿ ಚಂಚಲವಾಗಿರುತ್ತದೆ. ಇಂಥ ಜನರಿಗೆ ಅನಿತ್ಯವಾದ ಸ್ವರ್ಗಸುಖಕ್ಕಿಂತಲೂ ಹೆಚ್ಚಿನ ಮಹತ್ವವಾದ ಮೋಕ್ಷ ಎಂಬುವ ನಿತ್ಯ ಸುಖ ಸಿಗುವುದು ಸಾಧ್ಯವಿಲ್ಲ. ಆದ್ದರಿಂದ ಕರ್ಮಕಾಂಡಿಗಳು ಹೇಳಿದ ವೈದಿಕ ಕಾಮ್ಯಕರ್ಮಗಳ ಗೊಂದಲಕ್ಕೆ ಬೀಳದೇ ನಿಷ್ಕಾಮ ಬುದ್ಧಿಯಿಂದ ಫಲಾಶೆಯನ್ನು ಬಿಟ್ಟು ಕರ್ಮಮಾಡುವುದನ್ನು ಕಲಿತುಕೊ ಎಂದು ಶ್ರೀಕೃಷ್ಣ ಉಪದೇಶಿಸಲು ಪ್ರಾರಂಭಿಸಿ "ಕರ್ಮ ಮಾಡುವುದು ಮಾತ್ರ ನಿನ್ನ ಅಧಿಕಾರ, ಅದರ ಫಲದಬಗ್ಗೆ ಆಲೋಚನೆ ಮಾಡುವುದು ಸರಿಯಾದುದಲ್ಲ. ಫಲಕೊಡುವವನು ಪರಮೇಶ್ವರನಿದ್ದಾನೆಂದು ಭಾವಿಸಿ ಸಮಬುದ್ಧಿಯಿಂದ ಕರ್ತವ್ಯವನ್ನು ತಿಳಿದು ಯಾರು ಕರ್ಮ

ಗಳನ್ನು ಮಾಡುತ್ತಾರೋ ಅವರಿಗೆ ಪಾಪ ಪುಣ್ಯದ ಲೇಪ ಅಂಟಿಕೊಳ್ಳುವುದಿಲ್ಲ. ಇಂಥ ಸಮಬುದ್ಧಿಯನ್ನು ಆಶ್ರಯಿಸು, ಇದಕ್ಕೆ ಯೋಗವೆನ್ನುತ್ತಾರೆ. ಅಂದರೆ ಪಾಪದ ಲೇಪವಿಲ್ಲದೇ ಕರ್ಮಗಳನ್ನು ಮಾಡುವ ಯುಕ್ತಿ ಅಥವಾ ಸದುಪಾಯವೆಂದು ಹೇಳುತ್ತಾರೆ. ಈ ಯೋಗವನ್ನು ನೀನು ಗಳಿಸಿದರೆ ಕರ್ಮಮಾಡಿದರೂ ಕೂಡ ನಿನಗೆ ಮೋಕ್ಷ ದೊರಕುವುದು. ಮೋಕ್ಷಕ್ಕಾಗಿ ಕರ್ಮಗಳನ್ನು ಬಿಡಬೇಕಿಂದಿಲ್ಲ" ಎಂದು ಮುಂತಾಗಿ ಕರ್ಮಯೋಗದ ರಹಸ್ಯವನ್ನು ಹೇಳಿ, ಬುದ್ಧಿ ಸಮವಾಗಬೇಕಾದರೆ ಸ್ಥಿತಪ್ರಜ್ಞನಾಗಬೇಕಾಗುವುದು ಎಂದು ವಿವರಿಸುತ್ತ ಸ್ಥಿತಪ್ರಜ್ಞರ ಲಕ್ಷಣಗಳನ್ನು ಅರ್ಜುನನು ಕೇಳಿದ ಪ್ರಶ್ನೆಯ ಮೇರೆಗೆ ಭಗವಂತನು ವಿವರಿಸಿದ್ದಾನೆ. ಪಾಶ್ಚಾತ್ಯದರ್ಶನ ಶಾಸ್ತ್ರ ಇತಿಹಾಸದಲ್ಲಿ ಸ್ಥಿತಪ್ರಜ್ಞರಿಗೆ "Stoic" -- ಸುಖದುಃಖ ಸಮತಾವಾದಿ, ದಾರ್ಶನಿಕರು ಎಂದು ಹೇಳುತ್ತಾರೆ. ಬಹುಶಃ ಇವೇ ಲಕ್ಷಣಗಳು ಇಬ್ಬರಲ್ಲಿಯೂ ಸಮಾನವಾಗಿ ಕಂಡು ಬರುತ್ತವೆ.

ಈ ಸ್ಥಿತಪ್ರಜ್ಞನ ಸ್ಥಿತಿಗೆ ಬ್ರಾಹ್ಮೀಸ್ಥಿತಿ ಅಥವಾ ಮೋಕ್ಷ ಎಂದು ಹೇಳುತ್ತಾರೆ. ಈ ರೀತಿಯಾಗಿ ಯುದ್ಧವನ್ನು ಏಕೆ ಮಾಡಬೇಕು ಎಂಬುವುದಕ್ಕೆ ಮೊದಲು ಸಾಂಖ್ಯಮಾರ್ಗದ ಪ್ರಕಾರ ಕಾರಣಗಳನ್ನು ವಿವರಿಸಿ ಕರ್ಮಯೋಗ ಮಾರ್ಗದಂತೆ ಕೂಡ ಕರ್ಮಗಳನ್ನು ಮಾಡುವ ಕೌಶಲವನ್ನು ಮತ್ತು ಅದರ ಹಿರಿಮೆಯನ್ನು ಪರಮಾತ್ಮನು ಹೇಳಿ ಸ್ಥಿತಪ್ರಜ್ಞನಂತೆ ಬುದ್ಧಿಯನ್ನು ಸ್ಥಿರ ಮತ್ತು ಸಮಮಾಡಿಕೊಂಡರೆ ವಿಷಹೀರಿದ ಚೇಳಿನಂತೆ ಕರ್ಮಗಳನ್ನು ಮಾಡಿದರೂ ಕೂಡ ಯಾವ ಪಾಪವೂ ತಗಲುವುದಿಲ್ಲವೆಂದು ವಿವರಿಸಿ ಈ ಅಧ್ಯಾಯವನ್ನು ಸಮಾಪ್ತಿಗೊಳಿಸಿದ್ದಾನೆ. ಗೀತೆಯ ತಾತ್ಪರ್ಯವು ಪ್ರವೃತ್ತಿಪರವಾಗಿದೆ ಎಂಬುದಕ್ಕೆ ಮಹಾಭಾರತ, ಭಾಗವತ ಮತ್ತು ಇತರ ಪುರಾಣಗಳಲ್ಲಿಯ ಸೂಕ್ತ ಆಧಾರವಚನಗಳಿಂದ ಪುಷ್ಟೀಕರಿಸಲಾಗಿದೆ.

## ಮೂರನೆಯ ಅಧ್ಯಾಯ :

ಈ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನು ಭಗವಂತನನ್ನು ಮತ್ತೆ ಪ್ರಶ್ನೆಕೇಳುತ್ತಾನೆ. ಏನೆಂದರೆ ನೀನು ಸ್ಥಿತಪ್ರಜ್ಞ ಲಕ್ಷಣಗಳನ್ನು ತಿಳಿಸಿ ಕರ್ಮಗಳಿಗಿಂತ ಸ್ಥಿರ ಮತ್ತು ಸಮನಾದ ಬುದ್ಧಿಯೇ ಶ್ರೇಷ್ಠವೆಂದು ಹೇಳಿದ ಮೇಲೆ ಈ ಯುದ್ಧದಂತಹ ಘೋರವಾದ ಕರ್ಮದಲ್ಲಿ ನನ್ನನ್ನು ಏಕೆ ತೊಡಗಿಸಬಯಸುತ್ತೀ? ಬುದ್ಧಿಯೋಗವನ್ನು ಆಚರಿಸಿದರೆ ಸಾಕು, ಕರ್ಮದ ಅವಶ್ಯಕತೆಯೇ ಇಲ್ಲವಲ್ಲ ಎಂದು ಮುಂತಾಗಿ........ ಅದಕ್ಕೆ ಪುನಃ ವಿಸ್ತಾರವಾಗಿ ಈ ಅಧ್ಯಾಯದಲ್ಲಿ ಕರ್ಮಯೋಗದ ರಹಸ್ಯವನ್ನು ಪರಮಾತ್ಮನು ತಿಳಿಸುತ್ತಾನೆ. ನಾನು ನಿನಗೆ ಮೊದಲು ಸಾಂಖ್ಯಮಾರ್ಗ ಮತ್ತು ಯೋಗಮಾರ್ಗವೆಂದು ಎರಡು ಮಾರ್ಗಗಳನ್ನು ಹೇಳಿದ್ದೇನೋ ನಿಜ. ಆದರೆ ಯಾವ ಮನುಷ್ಯನಿಗಾದರೂ ಕರ್ಮಗಳ ಬಿಡುವುದು ಅಸಾಧ್ಯವಾದದ್ದು. ಎಲ್ಲಿಯವರೆಗೆ ಮನುಷ್ಯನು ದೇಹವನ್ನು ಧರಿಸಿದ್ದಾನೆಯೋ ಅಲ್ಲಿಯವರೆಗೆ ಪ್ರಕೃತಿಯು ಸ್ವಾಭಾವಿಕವಾಗಿಯೇ ಅವನಿಗೆ ಕರ್ಮಗಳನ್ನು ಮಾಡಲು ತೊಡಗಿಸುವುದು. ಪ್ರಕೃತಿಯ ಈ ಕರ್ಮಗಳನ್ನು ಮಾಡುವುದು ಬಿಡಲಾಗದು. ಅದಕ್ಕಾಗಿ ಇಂದ್ರಿಯ ನಿಗ್ರಹಮಾಡಿ ಬುದ್ಧಿಯನ್ನು ಸ್ಥಿರಗೊಳಿಸಿ ಕೇವಲ ಕರ್ಮೇಂದ್ರಿಯಗಳಿಂದ ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ಮಾಡುತ್ತಿರುವುದೇ ಶ್ರೇಯಸ್ಕರವಾದದ್ದು. ನೀನು ಕರ್ಮಗಳನ್ನು ಮಾಡಲೇಬೇಕು. ಮಾಡದೇ ಇದ್ದರೆ, ನಿನ್ನ ಜೀವನ ನಿರ್ವಹಣೆ ಕೂಡ ಸಾಧ್ಯಾವಾಗಲಾರದು. ಕರ್ಮವನ್ನು ಪರಮೇಶ್ವರನು ಸೃಷ್ಟಿಸಿದ್ದಾನೆ. ಮನುಷ್ಯನಲ್ಲ. ಬ್ರಹ್ಮದೇವನು ಸೃಷ್ಟಿ ಮತ್ತು ಪ್ರಜೆಗಳನ್ನು ಹುಟ್ಟಿಸುವ ಸಮಯದಲ್ಲಿಯೇ "ಯಜ್ಞ" ಎಂಬುದನ್ನು ಹುಟ್ಟಿಸಿ, ಈ ಯಜ್ಞದಿಂದ ನೀವು ಸಮೃದ್ಧಿಯನ್ನು ಪಡೆಯಿರಿ ಎಂದು ಪ್ರಜೆಗಳಿಗೆ ಹೇಳಿದನು. ಯಜ್ಞ ಎಂದರೆ ಕರ್ಮವೆಂದೇ ತಿಳಿಯಬೇಕು. ಮನುಷ್ಯ ಮತ್ತು ಅವನ ಕರ್ಮ ಇವು ಎರಡೂ ಒಂದೇ ಸಮಯದಲ್ಲಿ ಹುಟ್ಟಿದವು ಎಂದು ತಿಳಿಯಬೇಕು. ಈ ಕರ್ಮಗಳು ಕೇವಲ ಯಜ್ಞಕ್ಕಾಗಿಯೇ ಇರುವುದರಿಂದ, ಯಜ್ಞವು ಮನುಷ್ಯನು ಮಾಡಬೇಕಾದ ಕರ್ತವ್ಯವಾದ್ದರಿಂದ ಈ ಕರ್ಮಗಳ ಫಲಗಳು ಮನುಷ್ಯನಿಗೆ ಬಂಧನಕಾರಕವಾಗುವುದಿಲ್ಲ. ಜ್ಞಾನಿಯಾದವನು ಯಜ್ಞ ಕರ್ಮಗಳನ್ನು ಕೂಡ ಆಸಕ್ತಿ ಇಲ್ಲದೆ ಯಜ್ಞ ಚಕ್ರವನ್ನು ಮುಂದುವರಿಸುವುದಕ್ಕಾಗಿ ಮಾಡಬೇಕು. ಕೇವಲ ಸ್ವಾರ್ಥಕ್ಕಾಗಿ ಅಲ್ಲದಿದ್ದರು ಲೋಕ ಸಂಗ್ರಹಕ್ಕಾಗಿ, ನಿಷ್ಕಾಮ ಬುದ್ಧಿಯಿಂದ ಕರ್ಮಗಳನ್ನು ಮಾಡಲೇಬೇಕು. ಜನಕಾದಿ ಜ್ಞಾನಿ ಪುರುಷರೂ ಸ್ವಯಂ ಭಗವಂತನು ಕೂಡ ಈ ಲೋಕ ಸಂಗ್ರಹಕ್ಕಾಗಿಯೇ ಕರ್ಮಗಳನ್ನು ಮಾಡುತ್ತಿರುವರು. ಸಾಮಾನ್ಯ ಜನರಿಗೆ ಜ್ಞಾನಿಪುರುಷರು ಲೋಕನಾಯಕರಾಗಿರುತ್ತಾರೆ. ಅವರ ಆಚರಣೆಯಂತೆ ಇತರರು ಅವರನ್ನು ಅನುಸರಿಸುತ್ತಾರೆ. ಆದ್ದರಿಂದ ಜನರಿಗೆ ಸರಿಯಾದ ಮಾರ್ಗದರ್ಶನಮಾಡಿ ಆತ್ಮಶ್ರೇಯಸ್ಸಿನೆಡೆಗೆ ಸಾಮಾನ್ಯ ಜನರನ್ನು ಒಯ್ಯುವುದು ನಾಯಕರ ಕರ್ತವ್ಯವಾಗಿದೆ. ಪರಮೇಶ್ವರಾರ್ಪಣ ಬುದ್ಧಿಯಿಂದ ಯುದ್ಧವನ್ನು ಮಾಡಿ ನಿನ್ನ ಕರ್ತವ್ಯವನ್ನು ಮಾಡು ಎಂದು ಭಗವಂತನು ಉಪದೇಶಿಸುತ್ತಾ ಪ್ರಕೃತಿಯು ಪ್ರಬಲವಾದದ್ದರಿಂದ ಮನುಷ್ಯನು ಎಷ್ಟು ಜ್ಞಾನಿಯಾದರೂ ಇಂದ್ರಿಯ ನಿಗ್ರಹ ಮಾಡುವುದು ಸಹಜ ಸಾಧ್ಯವಾದ ಮಾತಲ್ಲ. ಇಂದ್ರಿಯಗಳನ್ನು ವಶಮಾಡಿಕೊಂಡು ಸ್ವಧರ್ಮಪಾಲನೆ ಮಾಡಲೇಬೇಕು. ಅದು ಕೀಳು ಮೇಲು ಎಂಬುವ ವಿಚಾರ ಅನುಚಿತವಾದದ್ದು. ಅದಕ್ಕಾಗಿ, ವ್ಯಾಧನ ಮತ್ತು ತುಲಾಧಾರ ಆಚರಣೆಯೇ ಸಾಕ್ಷಿ. "ಎಲ್ಲ ಕರ್ಮಗಳಿಗೆ ಪ್ರಕೃತಿಯೇ ಕಾರಣವಾದರೆ ಮನುಷ್ಯನು ತನ್ನ ಇಚ್ಛೆ ಇಲ್ಲದಿದ್ದರೂ ಪಾಪವನ್ನು ಏಕೆ ಮಾಡುತ್ತಾನೆ" ಎಂದು ಅರ್ಜುನನು ಕೇಳಿದ ಪ್ರಶ್ನೆಗೆ ಭಗವಂತನು ಕಾಮಕ್ರೋಧಾದಿ ವಿಕಾರಗಳು ಬಲತ್ಕಾರದಿಂದ ಮನುಷ್ಯನನ್ನು ಪಾಪದೆಡೆಗೆ ನೂಕುತ್ತವೆ. ಎಲ್ಲಕ್ಕೂ ಪ್ರಧಾನ ಶತ್ರುವೆಂದರೆ ಕಾಮ, ಅಥವಾ ಇಚ್ಛೆ. ಅದನ್ನು ನಿಯಂತ್ರಿಸಿ ಮನಸ್ಸನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕು. ಸಾರಾಂಶವೆಂದರೆ ಲೋಕ ಸಂಗ್ರಹಕ್ಕಾಗಿ ನಿಷ್ಕಾಮಬುದ್ಧಿಯಿಂದ ಪರಮೇಶ್ವರಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡಲೇಬೇಕು ಎಂದು ತಿಳಿಸಿ ಭಕ್ತಿ ಮಾರ್ಗದ ಪ್ರಾರಂಭವು ಕೂಡ ಈ ಅಧ್ಯಾಯದ ಕೊನೆಯಲ್ಲಿ ಮಾಡಿ ಈ ಅದ್ಯಾಯವನ್ನು ಸಮಾಪ್ತಿಗೊಳಿಸಲಾಗಿದೆ.

## ಭಕ್ತಿಯೋಗ :

ಮನುಷ್ಯ ಜೀವನದಲ್ಲಿ ಬುದ್ಧಿಯು ಎಷ್ಟು ಮಹತ್ವದ್ದಾಗಿರುವುದೋ ಅಷ್ಟೇ ಮಹತ್ವದ್ದು ಶ್ರದ್ಧೆಯಾಗಿದೆ. ಜ್ಞಾನವು ಶ್ರದ್ಧೆಯಿಂದ ಪವಿತ್ರವಾಗುವುದು ಮತ್ತು ಶ್ರದ್ಧೆಯು ಜ್ಞಾನದಿಂದ ಶುದ್ಧವಾಗುವುದು ಎಂದು ಶಿಷ್ಟರು, ಬಲ್ಲವರು ಹೇಳಿದ ಮಾತು. ಪ್ರತಿದಿನವು ಸೂರ್ಯನ ಉದಯವನ್ನು ನೋಡಿದರೂ ಮತ್ತೆ ನಾಳೆ ಸೂರ್ಯನ ಉದಯವಾಗುವುದೆಂಬುದು ಶ್ರದ್ಧೆಯಿಂದ ನಂಬಬೇಕಾಗಿದೆ. ಉಪನಿಷತ್ತಿನಲ್ಲಿ ಅರುಣಿ ಶ್ವೇತಕೇತುವಿನ ಸಂವಾದದಲ್ಲಿ ಅತಿ ವಿಶಾಲವಾದ ವಟವೃಕ್ಷಕ್ಕೆ ಅತಿಸೂಕ್ಷ್ಮವಾದ ಬೀಜವೇ ಕಾರಣವೆಂದು ತೋರಿಸಿ ಇದನ್ನು ನೀನು ನಂಬು ಎಂದು ಎಂದು ಹೇಳಲಾಗಿದೆ. ಶ್ರದ್ಧೆಯೇ ಭಕ್ತಿಯ ಮೊದಲ ಸೋಪಾನವಾಗಿದೆ. ಯಾವುದೇ ತತ್ವವು ಬುದ್ಧಿಗಮ್ಯವಾದರೂ ಹೃದಯದಲ್ಲಿ ದೃಢವಾಗಿ ಅಂಕಿತವಾಗಲಿಕ್ಕೆ ಶ್ರದ್ಧೆ, ಭಕ್ತಿ ಇವು ಅವಶ್ಯಕವಾದವು. ಸ್ನೇಹ, ಪ್ರೀತಿ, ವಾತ್ಸಲ್ಯ ಮತ್ತು ಭಕ್ತಿಗಳು ಮನುಷ್ಯ ಜೀವನವನ್ನು ರಸಮಯವನ್ನಾಗಿ ಮಾಡಿ ಅವನ ಭಾವಮಯ ಜೀವನದ ಉನ್ನತಿಗೆ ಕಾರಣಗಳಾಗುತ್ತವೆ. ಪರಮೇಶ್ವರನಲ್ಲಿ ಇಟ್ಟಿರುವ ಶ್ರೇಷ್ಠವಾದ ಪ್ರೀತಿಗೆ ಭಕ್ತಿ ಎಂದು ಹೇಳುವರು. "ಪರಾನುರಕ್ತಿಃ ಈಶ್ವರೇ", ಭಕ್ತಿಯ ಈ ಮಾರ್ಗವು ಮೋಕ್ಷಮಾರ್ಗಗಳಲ್ಲಿ ರಾಜಮಾರ್ಗ ಎಂದರೆ ಸಾಮಾನ್ಯ

ರಿಗೂ ಸಹಜಸುಲಭವಾದ ಮಾರ್ಗವಾಗಿದೆ. ರಿಂದಲೇ ಅದನ್ನು ರಾಜವಿದ್ಯಾ ಮತ್ತು ರಾಜ ಶ್ಯವೆಂದು ಕರೆಯುವರು. ಕೇವಲ ಬುದ್ಧಿ ಪ್ರಧಾನ ನಿಗಳು ಅವ್ಯಕ್ತ ಉಪಾಸನೆಯನ್ನು ಮಾಡಬು ು. ಆದರೆ ಉಳಿದವರಿಗೆ ವ್ಯಕ್ತೋಪಾಸನೆಯೇ ಭವಾದ ಮಾರ್ಗವು. ಜ್ಯಾಮಿತಿ ಶಾಸ್ತ್ರದಲ್ಲಿ ಳರೇಖೆ ಮತ್ತು ಸಮಾಂತರ ರೇಖೆಯ ತತ್ವ ್ನ ಸ್ಪಷ್ಟೀಕರಿಸಬೇಕಾದರೆ, ಅದರಂತೆ ಬಾಲಕ ಅಕ್ಷರ ಪರಿಚಯವನ್ನು ಮಾಡಿಸಬೇಕಾದರೆ ವಾದ ಸಾಧನ ಸಾಮಗ್ರಿಗಳಿಂದ ಆ ಅವ್ಯಕ್ತ ನ ತತ್ವವನ್ನು ಹೇಗೆ ವಿವರಿಸುವರೋ ಹಾಗೆ ೂರ್ತನಾದ ಆ ಪರಮಾತ್ಮನನ್ನು ತಿಳಿದುಕೊ ೕಕಾದರೆ ನಾವು ಕಟ್ಟಿಗೆ, ಕಲ್ಲು, ಮಣ್ಣುಗಳಿಂದ ಗ್ರಾಮ, ಶಿವಲಿಂಗ, ಧಾತುಮಯ ಮೂರ್ತಿಗ ್ನ ನಿರ್ಮಿಸಿ ಅವುಗಳನ್ನು ದೇವರೆಂದು ಪೂಜಿಸು ೆ. ಎಲ್ಲಕಡೆಗೂ ಸರ್ವವ್ಯಾಪಿಯಾದ ಪರಮಾತ್ಮ ್ನ ಕಾಣುವ ದೃಷ್ಟಿ ಮತ್ತು ಧೃಡವಾದ ಜ್ಞಾನ ವಾಗಬೇಕಾದರೆ ಈ ವ್ಯಕ್ತೋಪಾಸನೆ ಅಥವಾ ಯ ಮಾರ್ಗವು ಸುಲಭವಾದದ್ದು. ಸರ್ವಸಾಕ್ಷಿ, ರ್ಂತರ್ಯಾಮಿಯಾದ ಆ ಪರಮಾತ್ಮ ಪ್ರತೀ ಾತ್ರಗಳೇ ಈ ಮೂರ್ತಿಗಳು. ನಾಮರೂಪ ್ಲಿ ಭೇದವೇ ಹೊರತು ಮೂಲ ಸ್ವರೂಪದ ಂವಳಿಕೆಯಲ್ಲಿ ಭೇದವಿಲ್ಲ. ಯಾವ ರೂಪದ ಾದರೂ ಅವನನ್ನು ಪೂಜಿಸಬಹುದು. ವ್ಯಕ್ತ ೂಪದಲ್ಲಿ ಆ ಪರಮಾತ್ಮನ ನಿಜಸ್ವರೂಪವನ್ನು ಸು ಅನನ್ಯಭಾವದಿಂದ ಅವನಿಗೆ ಶರಣುಹೋ ವುದು, ಮೋಕ್ಷದ ಪ್ರತ್ಯಕ್ಷವಾದ ಮತ್ತು ಸುಲಭ ದ ಮಾರ್ಗವೆಂದು ಹೇಳಲಾಗಿದೆ. ಭಕ್ತನಾದ ು ಕೂಡ ತನ್ನ ಕರ್ತವ್ಯವನ್ನು ಫಲಾಸೆ ಇಲ್ಲದೆ ಡುತ್ತಲೇ ಇರಬೇಕು ಎಂಬುವ ಕರ್ಮಯೋ ಪ್ರಧಾನ ತತ್ವವನ್ನು ಮೇಲಿಂದಮೇಲೆ ಒತ್ತಿ ಳಲು ಭಗವಂತನು ಮರೆಯುವುದಿಲ್ಲ. ಎಲ್ಲ ರ್ಗಳನ್ನು ನನಗೆ ಅರ್ಪಿಸುವುದರಿಂದ ಕರ್ಮ ಶುಭಾಶುಭ ಫಲಗಳಿಂದ ನೀನು ಮುಕ್ತನಾಗು ೆಂದು ಶ್ರೀಕೃಷ್ಣನು ಹೇಳಿದ್ದಾನೆ, ಮತ್ತು ಎರಡ ು ಅಧ್ಯಾಯದಲ್ಲಿ ವರ್ಣಿಸಿದ ಸ್ಥಿತಪ್ರಜ್ಞನ ಗುಣ ್ಲಿ ಮತ್ತು ಈ ಅಧ್ಯಾಯದಲ್ಲಿ ವರ್ಣಿಸಿರುವ ಮ ಭಕ್ತನ ಗುಣಗಳಲ್ಲಿ ಇರುವ ಸಾಮ್ಯವನ್ನು ್ಪಪಡಿಸಿದ್ದಾನೆ. ಎಲ್ಲ ಪ್ರಾಣಿಗಳಲ್ಲಿ ತನ್ನ ಮತ್ತು ಮಾತ್ಮನ ಸ್ವರೂಪವನ್ನು ಕಾಣುವವನು ಮತ್ತು ರಂತೆ ಪರಮಾತ್ಮನ ಮತ್ತು ತನ್ನಲ್ಲಿ ಎಲ್ಲ ಪ್ರಾಣಿ ್ನು ಸ್ವರೂಪವನ್ನು ಕಾಣುವವನೇ ನಿಜವಾದ ಷ್ಣನಾದ ಭಾಗವತ ಎಂದರೆ ಭಗವದ್ಭಕ್ತ ಎಂಬ ಗವತರ ನುಡಿಯು ಇಲ್ಲಿ ಯಥಾರ್ಥವಾಗಿ ಶ್ರೇಷ್ಠ ಭಕ್ತನಿಗೆ ಅನ್ವಯಿಸುತ್ತದೆ.

ಭಗವಂತನ ಸ್ವರೂಪ ಮಹಾತ್ಮವನ್ನು ಅರಿತು ಭಕ್ತಿಯಿಂದ ಅವನ ಅರ್ಚನೆಮಾಡಿ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸುವುದೇ ಭಗವಂತನ ಆರಾಧನೆ ಎಂದು ಭಾವಿಸಿ ನಡೆದುಕೊಳ್ಳುವುದೇ ಜೀವನದ ಗುರಿ ಎಂದು ಪ್ರತಿಪಾದಿಸಲಾಗಿದೆ. ಸ್ವಕರ್ಮಣಾ ತಮಭ್ಯರ್ಚ -- ಸ್ವೇಸ್ವೇ ಕರ್ಮಣ್ಯಭಿರತಃ-- ಮೊದಲಾದ ಉಪದೇಶಗಳು ಕರ್ಮಯೋಗದ ತತ್ವವನ್ನೇ ಪಷ್ಟೀಕರಿಸುತ್ತದೆ. ಕರ್ಮಯೋಗಕ್ಕೆ ಪ್ರಧಾನ ಸಾಧನವಾಗಿ ಭಕ್ತಿಯೋಗವನ್ನು ಗೀತೆಯಲ್ಲಿ ಹೇಳಲಾಗಿದೆ. ಭಕ್ತಿಯೋಗದ ಮಹತ್ವವನ್ನು ವಿವರಿಸುವ ಎಷ್ಟೋ ಮಾತುಗಳಲ್ಲಿ ಒಂದೆರಡು ಉದಾಹರಣೆಗಳು ಪ್ರಮಾಣಗಳಾಗಿವೆ.

## ಉಪಸಂಹಾರ :

ಈ ರೀತಿ ಗೀತಾಧರ್ಮವು ನಿರ್ಭಯ ಮತ್ತು ವ್ಯಾಪಕವಿದ್ದು ಎಲ್ಲರಿಗೂ ಸಮಾನವಾಗಿ ಅಂದರೆ ಜಾತಿ, ಸಮಾಜ, ದೇಶವೆಂಬ ಭೇದಗಳನ್ನು ಪರಿಗಣಿಸದೆ ಒಂದೇ ರೀತಿಯಿಂದ ಎಲ್ಲರಿಗೂ ಸದ್ಗತಿಯನ್ನು ಕೊಡುವಂತಹ ಉಳಿದ ಎಲ್ಲ ಧರ್ಮಗಳ ಬಗ್ಗೆ ಸಹಿಷ್ಣುತೆಯನ್ನು ತೋರುವಂತಹ ಜ್ಞಾನ, ಭಕ್ತಿ, ಕರ್ಮಯುಕ್ತವಾದದ್ದು. ಈ ಗೀತಾ ಧರ್ಮವು ಸನಾತನ ವೈದಿಕ ಧರ್ಮವೃಕ್ಷದ ಅತ್ಯಂತ ಮಧುರ ಮತ್ತು ಅಮೃತ ಫಲವೆಂದೇ ಸಾರಿ ಹೇಳಬಹುದು. ಬುದ್ಧಿಗಮ್ಯವಾದ ಬ್ರಹ್ಮಜ್ಞಾನಕ್ಕೆ ಪ್ರೇಮಗಮ್ಯವಾದ ವ್ಯಕ್ತೋಪಾಸನೆಯ ಭಕ್ತಿಯನ್ನು ಜೋಡಿಸಿ ಕರ್ಮಕಾಂಡದ ಪ್ರಾಚೀನ ಪರಂಪರೆಯಂತೆ "ನೀವು ನಿಮ್ಮ ನಿಮ್ಮ ಯೋಗ್ಯತೆಗಳಿಗನುಗುಣವಾಗಿ ನಿಮ್ಮ ನಿಮ್ಮ ಸಂಸಾರಿಕ ಕರ್ತವ್ಯಗಳನ್ನು ಲೋಕ ಸಂಗ್ರಹಕ್ಕಾಗಿ ಫಲಾಸೆ ಇಲ್ಲದೆ ತನ್ನಂತೆ ಪರರನ್ನು ಬಗೆದು ಉತ್ಸಾಹದಿಂದ ಆಮರಣಾಂತ ಮಾಡುತ್ತ, ಪಿಂಡ ಬ್ರಹ್ಮಾಂಡಗಳಲ್ಲಿ ಒಂದಾಗಿ ತುಂಬಿಕೊಂಡಿರುವ ಆ ಪರಮೇಶ್ವರನ ಪೂಜೆಯನ್ನು ಮಾಡಿ, ಇದರಲ್ಲಿಯೇ ನಿಮ್ಮ ಪಾರಲೌಕಿಕ ಮತ್ತು ಐಹಿಕ ಕಲ್ಯಾಣವಿದೆ"ಯೆಂದು ಅರ್ಜುನನನ್ನು ನಿಮಿತ್ತಮಾಡಿ ಎಲ್ಲ ಮಾನವರಿಗೂ ಏಕಕಂಠದಿಂದ ಭಗವಂತನು ಗೀತೆಯ ಮುಖಾಂತರ ಸಾರಿ ಹೇಳಿದ್ದಾನೆ. ಆದ್ದರಿಂದ ಕರ್ಮ, ಜ್ಞಾನ (ಬುದ್ಧಿ) ಭಕ್ತಿ (ಪ್ರೇಮ) ಇವುಗಳಲ್ಲಿ ಮೇಲೆಕಾಣುವ ವಿರೋಧ ಇಲ್ಲದಂತೆ ಆಗಿ ಆಯುಷ್ಯವನ್ನು ಯಜ್ಞಮಯವಾಗಿ ಸಾಗಿಸುವಂತೆ ಉಪದೇಶಿಸುವ ಗೀತಾ ಧರ್ಮದಲ್ಲಿ ಸಕಲ ವೈದಿಕ ಧರ್ಮದ ಸಾರ ತುಂಬಿದೆ. ಈ ರೀತಿಯಾಗಿ ಭಕ್ತಿ, ಜ್ಞಾನ ಮತ್ತು ಕರ್ಮಗಳನ್ನು ಸಮನ್ವಯಗೊಳಿಸಬೇಕು. ಪರಸ್ಪರ ಸಮಭಾವವನ್ನು ಬೆಳೆಸಬೇಕು. ಗೀತೆಯ ಸಂದೇಶದಂತೆ ಆ ಪರಮಾತ್ಮನನ್ನು ತಮ್ಮ ಕರ್ತವ್ಯಾಚರಣೆಯಿಂದ ಪೂಜಿಸಬೇಕು, ಇಂತಹ ಸಜ್ಜನರ ಸಂಖ್ಯೆ ಈ ದೇಶದಲ್ಲಿ ಬೆಳೆಯಬೇಕು ಎಂದು ಶ್ರೀಕೃಷ್ಣನ ಅಡಿಯಲ್ಲಿ ಪ್ರಾರ್ಥನೆ.

ಲೋಕಮಾನ್ಯ ಬಾಲಗಂಗಾಧರ ತಿಲಕರು ಆಧುನಿಕ ಭಾರತದ ಶ್ರೇಷ್ಠಚಿಂತಕರಲ್ಲಿ ಒಬ್ಬರು. ಅವರು ಶ್ರೀಮದ್ಭಗವದ್ಗೀತೆಯನ್ನು ಕರ್ಮಯೋಗ ಶಾಸ್ತ್ರವೆಂದೇ ಕರೆದರು. ಆಧುನಿಕ ಕಾಲದ ಅಗತ್ಯಕ್ಕೆ ತಕ್ಕಂತೆ ಫಲಾಪೇಕ್ಷೆ ಇಲ್ಲದ ಕರ್ಮಾನುಷ್ಠಾನಕ್ಕೆ ಅವಧಾರಣೆ ಹಾಕಿ ವಿವರಿಸಿದ ಅವರ ಅಭಿಮತ ಎಂದಿಗಾದರೂ ಮಾನ್ಯವೇ ಆಗಿದೆ. ಎಂತಲೇ ಅದರ ಸಂಗ್ರಹ ರೂಪವನ್ನು ಇಲ್ಲಿ ಸಾದರಪಡಿಸಲಾಗಿದೆ.



ವೃಕ್ಷೋ ರಕ್ಷತಿ ರಕ್ಷಿತಃ

ಹಸಿರಿದ್ದರೆ ಉಸಿರು

ಹಸಿರಿದ್ದರೆ ಉಣಿಸು

ಹಸಿರಿದ್ದರೆ ನೀರು

ಗಿಡಗಳನ್ನು ಕಾಪಾಡಿರಿ

ಮಾನವ ಪರಿಸರವನ್ನು ಕಾಪಾಡಿದಂತಾಗುತ್ತದೆ.

ರಿಗೂ ಸಹಜಸುಲಭವಾದ ಮಾರ್ಗವಾಗಿದೆ. ರಿಂದಲೇ ಅದನ್ನು ರಾಜವಿದ್ಯಾ ಮತ್ತು ರಾಜ ಕ್ಯವೆಂದು ಕರೆಯುವರು. ಕೇವಲ ಬುದ್ಧಿ ಪ್ರಧಾನ ನಿಗಳು ಅವ್ಯಕ್ತ ಉಪಾಸನೆಯನ್ನು ಮಾಡಬ ು. ಆದರೆ ಉಳಿದವರಿಗೆ ವ್ಯಕ್ತೋಪಾಸನೆಯೇ ಭವಾದ ಮಾರ್ಗವು. ಜ್ಯಾಮಿತಿ ಶಾಸ್ತ್ರದಲ್ಲಿ ಳರೇಖೆ ಮತ್ತು ಸಮಾಂತರ ರೇಖೆಯ ತತ್ತ್ವ ನ್ನ ಸ್ಪಷ್ಟೀಕರಿಸಬೇಕಾದರೆ, ಅದರಂತೆ ಬಾಲಕ ಅಕ್ಷರ ಪರಿಚಯವನ್ನು ಮಾಡಿಸಬೇಕಾದರೆ ವಾದ ಸಾಧನ ಸಾಮಗ್ರಿಗಳಿಂದ ಆ ಅವ್ಯಕ್ತ ದ ತತ್ವವನ್ನು ಹೇಗೆ ವಿವರಿಸುವರೋ ಹಾಗೆ ಮೂರ್ತನಾದ ಆ ಪರಮಾತ್ಮನನ್ನು ತಿಳಿದುಕೊ ಬೇಕಾದರೆ ನಾವು ಕಟ್ಟಿಗೆ, ಕಲ್ಲು, ಮಣ್ಣುಗಳಿಂದ ಲಿಗ್ರಾಮ, ಶಿವಲಿಂಗ, ಧಾತುಮಯ ಮೂರ್ತಿಗ ನ್ನ ನಿರ್ಮಿಸಿ ಅವುಗಳನ್ನು ದೇವರೆಂದು ಪೂಜಿಸು ವೆ. ಎಲ್ಲಕಡೆಗೂ ಸರ್ವವ್ಯಾಪಿಯಾದ ಪರಮಾತ್ಮ ನ್ನ ಕಾಣುವ ದೃಷ್ಟಿ ಮತ್ತು ದೃಢವಾದ ಜ್ಞಾನ ವಾಗಬೇಕಾದರೆ ಈ ವ್ಯಕ್ತೋಪಾಸನೆ ಅಥವಾ ಕ್ತಿಯ ಮಾರ್ಗವು ಸುಲಭವಾದದ್ದು. ಸರ್ವಸಾಕ್ಷಿ, ರ್ವಾಂತರ್ಯಾಮಿಯಾದ ಆ ಪರಮಾತ್ಮ ಪ್ರತೀ ಮಾತ್ರಗಳೇ ಈ ಮೂರ್ತಿಗಳು. ನಾಮರೂಪ ಗಳಲ್ಲಿ ಭೇದವೇ ಹೊರತು ಮೂಲ ಸ್ವರೂಪದ ಉವಳಿಕೆಯಲ್ಲಿ ಭೇದವಿಲ್ಲ. ಯಾವ ರೂಪದ ಯಾದರೂ ಅವನನ್ನು ಪೂಜಿಸಬಹುದು. ವ್ಯಕ್ತ ರೂಪದಲ್ಲಿ ಆ ಪರಮಾತ್ಮನ ನಿಜಸ್ವರೂಪವನ್ನು ಡು ಅನನ್ಯಭಾವದಿಂದ ಅವನಿಗೆ ಶರಣುಹೋ ವುದು, ಮೋಕ್ಷದ ಪ್ರತ್ಯಕ್ಷವಾದ ಮತ್ತು ಸುಲಭ ಾದ ಮಾರ್ಗವೆಂದು ಹೇಳಲಾಗಿದೆ. ಭಕ್ತನಾದ ನು ಕೂಡ ತನ್ನ ಕರ್ತವ್ಯವನ್ನು ಫಲಾಸೆ ಇಲ್ಲದೆ ಮಾಡುತ್ತಲೇ ಇರಬೇಕು ಎಂಬುವ ಕರ್ಮಯೋ ದ ಪ್ರಧಾನ ತತ್ವವನ್ನು ಮೇಲಿಂದಮೇಲೆ ಒತ್ತಿ ಹೇಳಲು ಭಗವಂತನು ಮರೆಯುವುದಿಲ್ಲ. ಎಲ್ಲ ರ್ಮಗಳನ್ನು ನನಗೆ ಅರ್ಪಿಸುವುದರಿಂದ ಕರ್ಮ ಳ ಶುಭಾಶುಭ ಫಲಗಳಿಂದ ನೀನು ಮುಕ್ತನಾಗು ಯೆಂದು ಶ್ರೀಕೃಷ್ಣನು ಹೇಳಿದ್ದಾನೆ, ಮತ್ತು ಎರಡ ಯ ಅಧ್ಯಾಯದಲ್ಲಿ ವರ್ಣಿಸಿದ ಸ್ಥಿತಪ್ರಜ್ಞನ ಗುಣ ಗಳಲ್ಲಿ ಮತ್ತು ಈ ಅಧ್ಯಾಯದಲ್ಲಿ ವರ್ಣಿಸಿರುವ ಪರಮ ಭಕ್ತನ ಗುಣಗಳಲ್ಲಿ ಇರುವ ಸಾಮ್ಯವನ್ನು ಸ್ಪಷ್ಟಪಡಿಸಿದ್ದಾನೆ. ಎಲ್ಲ ಪ್ರಾಣಿಗಳಲ್ಲಿ ತನ್ನ ಮತ್ತು ಪರಮಾತ್ಮನ ಸ್ವರೂಪವನ್ನು ಕಾಣುವವನು ಮತ್ತು ಅದರಂತೆ ಪರಮಾತ್ಮನ ಮತ್ತು ತನ್ನಲ್ಲಿ ಎಲ್ಲ ಪ್ರಾಣಿಗಳನ್ನು ಸ್ವರೂಪವನ್ನು ಕಾಣುವವನೇ ನಿಜವಾದ ಶ್ರೇಷ್ಠನಾದ ಭಾಗವತ ಎಂದರೆ ಭಗವದ್ಭಕ್ತ ಎಂಬ ಭಾಗವತರ ನುಡಿಯು ಇಲ್ಲಿ ಯಥಾರ್ಥವಾಗಿ ಶ್ರೇಷ್ಠ ಭಕ್ತನಿಗೆ ಅನ್ವಯಿಸುತ್ತದೆ.

ಭಗವಂತನ ಸ್ವರೂಪ ಮಹಾತ್ಮ್ಯವನ್ನು ಅರಿತು ಭಕ್ತಿಯಿಂದ ಅವನ ಅರ್ಚನೆಮಾಡಿ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸುವುದೇ ಭಗವಂತನ ಆರಾಧನೆ ಎಂದು ಭಾವಿಸಿ ನಡೆದುಕೊಳ್ಳುವುದೇ ಜೀವನದ ಗುರಿ ಎಂದು ಪ್ರತಿಪಾದಿಸಲಾಗಿದೆ. ಸ್ವಕರ್ಮಣಾ ತಮಭ್ಯರ್ಚ -- ಸ್ವೇಸ್ವೇ ಕರ್ಮಣ್ಯಭಿರತಃ-- ಮೊದಲಾದ ಉಪದೇಶಗಳು ಕರ್ಮಯೋಗದ ತತ್ವವನ್ನೇ ಪಷ್ಟೀಕರಿಸುತ್ತದೆ. ಕರ್ಮಯೋಗಕ್ಕೆ ಪ್ರಧಾನ ಸಾಧನವಾಗಿ ಭಕ್ತಿಯೋಗವನ್ನು ಗೀತೆಯಲ್ಲಿ ಹೇಳಲಾಗಿದೆ. ಭಕ್ತಿಯೋಗದ ಮಹತ್ವವನ್ನು ವಿವರಿಸುವ ಎಷ್ಟೋ ಮಾತುಗಳಲ್ಲಿ ಒಂದೆರಡು ಉದಾಹರಣೆಗಳು ಪ್ರಮಾಣಗಳಾಗಿವೆ.

## ಉಪಸಂಹಾರ :

ಈ ರೀತಿ ಗೀತಾಧರ್ಮವು ನಿರ್ಭಯ ಮತ್ತು ವ್ಯಾಪಕವಿದ್ದು ಎಲ್ಲರಿಗೂ ಸಮಾನವಾಗಿ ಅಂದರೆ ಜಾತಿ, ಸಮಾಜ, ದೇಶವೆಂಬ ಭೇದಗಳನ್ನು ಪರಿಗಣಿಸದೆ ಒಂದೇ ರೀತಿಯಿಂದ ಎಲ್ಲರಿಗೂ ಸದ್ಗತಿಯನ್ನು ಕೊಡುವಂತಹ ಉಳಿದ ಎಲ್ಲ ಧರ್ಮಗಳ ಬಗ್ಗೆ ಸಹಿಷ್ಣುತೆಯನ್ನು ತೋರುವಂತಹ ಜ್ಞಾನ, ಭಕ್ತಿ, ಕರ್ಮಯುಕ್ತವಾದದ್ದು. ಈ ಗೀತಾ ಧರ್ಮವು ಸನಾತನ ವೈದಿಕ ಧರ್ಮವೃಕ್ಷದ ಅತ್ಯಂತ ಮಧುರ ಮತ್ತು ಅಮೃತ ಫಲವೆಂದೇ ಸಾರಿ ಹೇಳಬಹುದು. ಬುದ್ಧಿಗಮ್ಯವಾದ ಬ್ರಹ್ಮಜ್ಞಾನಕ್ಕೆ ಪ್ರೇಮಗಮ್ಯವಾದ ವ್ಯಕ್ತೋಪಾಸನೆಯ ಭಕ್ತಿಯನ್ನು ಜೋಡಿಸಿ ಕರ್ಮಕಾಂಡದ ಪ್ರಾಚೀನ ಪರಂಪರೆಯಂತೆ "ನೀವು ನಿಮ್ಮ ನಿಮ್ಮ ಯೋಗ್ಯತೆಗಳಿಗನುಗುಣವಾಗಿ ನಿಮ್ಮ ನಿಮ್ಮ ಸಂಸಾರಿಕ ಕರ್ತವ್ಯಗಳನ್ನು ಲೋಕ ಸಂಗ್ರಹಕ್ಕಾಗಿ ಫಲಾಸೆ ಇಲ್ಲದೆ ತನ್ನಂತೆ ಪರರನ್ನು ಬಗೆದು ಉತ್ಸಾಹದಿಂದ ಆಮರಣಾಂತ ಮಾಡುತ್ತ, ಪಿಂಡ ಬ್ರಹ್ಮಾಂಡಗಳಲ್ಲಿ ಒಂದಾಗಿ ತುಂಬಿಕೊಂಡಿರುವ ಆ ಪರಮೇಶ್ವರನ ಪೂಜೆಯನ್ನು ಮಾಡಿ, ಇದರಲ್ಲಿಯೇ ನಿಮ್ಮ ಪಾರಲೌಕಿಕ ಮತ್ತು ಐಹಿಕ ಕಲ್ಯಾಣವಿದೆ"ಯೆಂದು ಅರ್ಜುನನನ್ನು ನಿಮಿತ್ತಮಾಡಿ ಎಲ್ಲ ಮಾನವರಿಗೂ ಏಕಕಂಠದಿಂದ ಭಗವಂತನು ಗೀತೆಯ ಮುಖಾಂತರ ಸಾರಿ ಹೇಳಿದ್ದಾನೆ. ಆದ್ದರಿಂದ ಕರ್ಮ, ಜ್ಞಾನ (ಬುದ್ಧಿ) ಭಕ್ತಿ (ಪ್ರೇಮ) ಇವುಗಳಲ್ಲಿ ಮೇಲೆಕಾಣುವ ವಿರೋಧ ಇಲ್ಲದಂತೆ ಆಗಿ ಆಯುಷ್ಯವನ್ನು ಯಜ್ಞಮಯವಾಗಿ ಸಾಗಿಸುವಂತೆ ಉಪದೇಶಿಸುವ ಗೀತಾ ಧರ್ಮದಲ್ಲಿ ಸಕಲ ವೈದಿಕ ಧರ್ಮದ ಸಾರ ತುಂಬಿದೆ. ಈ ರೀತಿಯಾಗಿ ಭಕ್ತಿ, ಜ್ಞಾನ ಮತ್ತು ಕರ್ಮಗಳನ್ನು ಸಮನ್ವಯಗೊಳಿಸಬೇಕು. ಪರಸ್ಪರ ಸಮಭಾವವನ್ನು ಬೆಳೆಸಬೇಕು. ಗೀತೆಯ ಸಂದೇಶದಂತೆ ಆ ಪರಮಾತ್ಮನನ್ನು ತಮ್ಮ ಕರ್ತವ್ಯಾಚರಣೆಯಿಂದ ಪೂಜಿಸಬೇಕು, ಇಂತಹ ಸಜ್ಜನರ ಸಂಖ್ಯೆ ಈ ದೇಶದಲ್ಲಿ ಬೆಳೆಯಬೇಕು ಎಂದು ಶ್ರೀಕೃಷ್ಣನ ಅಡಿಯಲ್ಲಿ ಪ್ರಾರ್ಥನೆ.

ಲೋಕಮಾನ್ಯ ಬಾಲಗಂಗಾಧರ ತಿಲಕರು ಆಧುನಿಕ ಭಾರತದ ಶ್ರೇಷ್ಠಚಿಂತಕರಲ್ಲಿ ಒಬ್ಬರು. ಅವರು ಶ್ರೀಮದ್ಭಗವದ್ಗೀತೆಯನ್ನು ಕರ್ಮಯೋಗ ಶಾಸ್ತ್ರವೆಂದೇ ಕರೆದರು. ಆಧುನಿಕ ಕಾಲದ ಅಗತ್ಯಕ್ಕೆ ತಕ್ಕಂತೆ ಫಲಾಪೇಕ್ಷೆ ಇಲ್ಲದ ಕರ್ಮಾನುಷ್ಠಾನಕ್ಕೆ ಅವಧಾರಣೆ ಹಾಕಿ ವಿವರಿಸಿದ ಅವರ ಅಭಿಮತ ಎಂದಿಗಾದರೂ ಮಾನ್ಯವೇ ಆಗಿದೆ. ಎಂತಲೇ ಅದರ ಸಂಗ್ರಹ ರೂಪವನ್ನು ಇಲ್ಲಿ ಸಾದರಪಡಿಸಲಾಗಿದೆ.



ಹಸಿರಿದ್ದರೆ ಉಸಿರು

ವೃಕ್ಷೋ ರಕ್ಷತಿ ರಕ್ಷಿತಃ

ಹಸಿರಿದ್ದರೆ ಉಣಿಸು

ಹಸಿರಿದ್ದರೆ ನೀರು

ಗಿಡಗಳನ್ನು ಕಾಪಾಡಿರಿ

ಮಾನವ ಪರಿಸರವನ್ನು

ಕಾಪಾಡಿದಂತಾಗುತ್ತದೆ.

# ಗೋವಾ

ವಿವಿಧ ಜನಾಂಗಗಳ ವಿಭಿನ್ನ ಸಂಸ್ಕೃತಿಗಳ ಅಪೂರ್ವ ಸಂಗಮವಾದ ಗೋವಾಕ್ಕೆ ಜಗತ್ತಿನ ಮೆಡಿಟರೇನಿಯನ್.........ಪ್ರವಾಸಿಗಳನ್ನು ಅಪಾರ ಸಂಖ್ಯೆಯಲ್ಲಿ ಆಕರ್ಷಿಸಲು ಇಲ್ಲಿಯ ಶ್ರೀಮಂತ ಪ್ರಕೃತಿ ಸೌಂದರ್ಯ, ನೀಲ ಕಡಲಿನ ಸುಂದರ ನೋಟ ಕಡಲ--ಕಿನಾರೆಯ ಪ್ರಕೃತಿ ಸೊಬಗು, ಭವ್ಯವಾದ ದೇವಾಲಯಗಳು, ಚರ್ಚುಗಳು ಕಾರಣವಾಗಿವೆ.

ಪ್ರಾಚೀನ ಭಾರತದ ಮಹಾದ್ವಾರವಾದ ಗೋವೆಯು ದಕ್ಷಿಣೋತ್ತರವಾಗಿ ೧೧೦ ಮೈಲು ಮತ್ತು ಪೂರ್ವ ಪಶ್ಚಿಮವಾಗಿ ೭೫ ಮೈಲು ವ್ಯಾಪಿಸಿದೆ. ಭೌಗೋಲಿಕವಾಗಿ ಭಾರತದೇಶದ ಮೂಲ ನೆಲದ ಅವಿಭಾಜ್ಯ ಅಂಗವಿದ್ದಂತಿದೆ. ಈ ಸ್ಥಳವು ಒಂದು ಸಮಯದಲ್ಲಿ ಜಗತ್ತಿನ ವ್ಯಾಪಾರೀ ಕೇಂದ್ರಗಳಲ್ಲೊಂದಾಗಿತ್ತು. ಆಗ ಜಗತ್ತಿನ ಅನೇಕ ಕಡೆಯಿಂದ ಜನರು ವ್ಯಾಪಾರಕ್ಕಾಗಿ ಈ ಸ್ಥಳಕ್ಕೆ ಬರುತ್ತಿದ್ದರು. ಇಂದೂ ಸಹ ಇದೇ ಆಕರ್ಷಣೆ ಮುಂದುವರಿದುಕೊಂಡು ಬಂದಿದೆ. ಹೀಗಾಗಿ ಗೋವಾ ಭಾರತದ ಮಹಾದ್ವಾರವಾಗಿದ್ದು ಅನೇಕ ದೇಶದ ಜನರು ಬಂದು ಹೋಗುವುದು ನಡೆಯುತ್ತಲೇ ಇದೆ.

ಕಡುನೀಲ ಕಡಲು, ಸುಂದರ ಕರೆಗಳಷ್ಟೇ ಅಲ್ಲ, ಗೋವಾದ ಅತಿ ವಿಶಿಷ್ಟ ಸಂಸ್ಕೃತಿ ಹಾಗೂ ವಿಲಕ್ಷಣ ಇತಿಹಾಸವೂ ಅಲ್ಲಿನ ಪ್ರವಾಸೋದ್ಯಮಕ್ಕೆ ಬೆನ್ನೆಲುಬಾಗಿ ನಿಂತಿದೆ. ೪೫೦ ವರ್ಷಗಳ ಪೋರ್ಚುಗೀಸ್ ಆಳ್ವಿಕೆಯಲ್ಲಿ ಯುರೋಪಿಯನ್ ಸಂಸ್ಕೃತಿ ಹಾಗೂ ನಡಾವಳಿಗಳನ್ನು ಮೈಗೂಡಿಸಿಕೊಂಡಿದೆ. ಲ್ಯಾಟಿನ್ ಜನರ ಅಚ್ಚುಕಟ್ಟುತನ ಹಾಡು -- ಕುಣಿತ ಕುಡಿತದ ಮೋಜಿನ ಪ್ರವೃತ್ತಿಯ ಜೊತೆಯಲ್ಲೇ ವಿಷ್ಣನ್ನರ ಸಂಕೋಚ ಸ್ವಭಾವವನ್ನು ಮೈಗೂಡಿಸಿಕೊಂಡವರು ಗೋವನ್ ಜನ. ಸಧೃಡ ಮೈಕಟ್ಟಿನ ಇಲ್ಲಿಯ ಜನ ಸಾಹಸಿಗಳು. ವ್ಯವಹಾರ ಕುಶಲರು. ನಗು -- ನಗುತ್ತಾ ಮಾತನಾಡುವರು. ಎಲ್ಲರೂ ಆತ್ಮೀಯರಂತೆ ವರ್ತಿಸುವರು. ಭಾರತದ ಇತರ ಪ್ರವಾಸೀ ತಾಣಗಳಲ್ಲಿ ಕಾಣಬರುವ, ಆಶೆಬುರುಕುತನ, ಮೋಸ, ವಂಚನೆ ಹೆಚ್ಚಿನಂಶ ಇಲ್ಲದ ಈ ವಿಶಿಷ್ಟ ಪ್ರದೇಶ ಸಹಜವಾಗಿಯೇ ಪ್ರವಾಸಿಗರನ್ನು ಆಕರ್ಷಿಸುವುದು.

ಇದರ ಜತೆಗೆ ಇಲ್ಲಿನ ಪೌರ ವ್ಯವಸ್ಥೆಯೂ ಪ್ರವಾಸಿ ಮಂದಿಗೆ ಅನುಕೂಲಕರವಾಗಿ ರೂಪುಗೊಂಡಿದೆ. ಎಲ್ಲ ಕಡೆಗೂ ಟಾರ್ ರಸ್ತೆ, ವಿದ್ಯುತ್ ದೀಪಗಳ ವ್ಯವಸ್ಥೆ, ನೀರಿನ ಸೌಕರ್ಯವಿದೆ. ಖಾಸಗಿ ಬಸ್, ಕಾರುಗಳೊಟ್ಟಿಗೆ, ಸಾಯಕಲ್ ಮೋಟಾರುಗಳು ಕೂಡ ಓಡಾಡಲು ಸಿಗುತ್ತವೆ. ಪಣಜಿಯಿಂದ ಗೋವಾದ ಯಾವದೇ ಮೂಲೆಗೆ ಹೋಗಲು ಜಲ, ನೆಲ, ಸಾರಿಗೆ ಸೌಕರ್ಯವಿದೆ. ಭಾರೀ ಅಗಲಕ್ಕೆ ಹರಿಯುವ ಮಾಂಡವೀ ನದಿಯಿಂದಾಗಿ ಗೋವಾದ ಹಲವೆಡೆ ನಾವೆಗಳಲ್ಲಿ ಸಂಚರಿಸಬಹುದಾಗಿದೆ. ಪಣಜಿಯ ಸಾರಿಗೆ ಬಸ್ಸುಗಳು ಪ್ರವಾಸಿಗರನ್ನು ಹತ್ತು ಹಲವು ಕೇಂದ್ರಗಳಿಗೆ ಸಂದರ್ಶಿಸಿ ತಿರುಗಿ ಪಣಜಿಗೆ ತರುವ ವ್ಯವಸ್ಥೆಯನ್ನು ಇಟ್ಟಿದೆ. ಪಣಜಿ ಮತ್ತು ಮುಂಬಯಿಗಳ ನಡುವೆ ಹಡಗುಗಳ ಓಡಾಟವೂ ಇದ್ದು, ಈ ನೌಕಾಯಾನದ ಪ್ರಯಾಣದಲ್ಲಿ ಪ್ರವಾಸಿಗರಾಗಿ ಹೆಚ್ಚಾಗಿ ಬರುವವರು ಹಿಪ್ಪಿಗಳು.

ಮಳೆಗಾಲದಲ್ಲಿ ಪ್ರವಾಸಿಗಳ ಸಂಖ್ಯೆ ಕ... ಅಕ್ಟೋಬರಿಗಾಗಲೇ ಚಟುವಟಿಕೆಗಳ ಹೆಚ್ಚಳ, ಡಿಸೆಂಬರನಲ್ಲಂತೂ ಕ್ರಿಸಮಸ್ ಹಬ್ಬದ ಸಡಗರ. ಜನವರಿಯಿಂದ ಪ್ರವಾಸಿಗರ ಸಂತೆ. ಎಪ್ರಿಲ್, ಮೇ ತಿಂಗಳಲ್ಲಂತೂ ಜನದಟ್ಟಣೆ ಹೇಳತೀರದು. ಕೆಲವೊಮ್ಮೆ ಒಂದಕ್ಕೆರಡು ಪಟ್ಟು ಹಣ ಕೊಟ್ಟರೂ ವಸತಿ ಗೃಹಗಳಲ್ಲಿ ಕೋಣೆ ಸಿಗದ ಪರಿಸ್ಥಿತಿ. ಗೋವಾದ ಸುಂದರ ಬೀಚುಗಳಲ್ಲಿ ವಿಹರಿಸಲೆಂದೇ ದೇಶಾದ್ಯಂತದಿಂದ ಜನರು ಧಾವಿಸಿ ಬರುತ್ತಾರೆ. ಗೋವಾದ ನೂರು ಕಿಲೋಮೀಟರ್ ಉದ್ದದ ಕಡಲ ತೀರದ ಅಗುವಾಡಾ, ಅಂಜುನಾ, ಅರಂಬೋಲ, ಕಲಾಂಗೂ, ಕೋಲ್ವಾ, ಚಾಪೋರಾ, ಪಾಲೋಲಿಮ್, ಬೇನಾಲಿಮ್, ಬಾಗಾ, ಮೋರ್ಜಿಮ್, ಮಿರಾಮರ್, ವಾಗಾತರ್ ಮುಂತಾದ ಎಲ್ಲ ಬೀಚುಗಳ ಬೆಳ್ಳಿ ತೆರೆಗಳು, ಬಿಳಿ ಮರಳಿಗಳು ಕಣ್ಮನಗಳಿಗೆ ಮುದ ನೀಡುತ್ತವೆ.



ಗೋವಾದಲ್ಲಿರುವ -- ಮಂಗೇಶಿ, ನುಗೇಶಿ, ಮಹಾಲಸಾ, ಶಾಂತಾದುರ್ಗಾ, ರಾಮನಾಥ, ದತ್ತಾತ್ರೇಯ ಮುಂತಾದ ದೇವಾಲಯಗಳು ಆಸ್ತಕರ ಆನಂದಧಾಮಗಳಾಗಿವೆ. ಕ್ರಿಶ್ಚಿಯನ್‌ರಿಗೆ ಪ್ರಸಿದ್ಧವಾದ ಹಲವು ಚರ್ಚ್‌ಗಳಿವೆ. ಅದರಲ್ಲಿ 'ಬೆಸಿಲಿಕಾ ಆಫ್ ಬೋಮ ಜೇಸಸ್' ೧೬೦೫ ರಲ್ಲಿ ಕಟ್ಟಿಸಿದ್ದು. ಅದರಲ್ಲಿ ಸೇಂಟ ಝೇವಿಯರನ ಕಳೇಬರವನ್ನು ಇಡಲಾಗಿದೆ.

ಗೋವೆಯ ಸುಂದರ ನಗರವಾದ ಪಣಜಿಯು ಮಾಂಡವೀ ನದಿಯು ಅರಬೀ ಸಮುದ್ರ ಸೇರುವಲ್ಲಿ ಎಡದಂಡೆಯ ಮೇಲಿದೆ. ಆಲ್ತಿನೋ ಬೆಟ್ಟದ ತುದಿಯಿಂದ ಪಣಜಿ ನಗರದ ಮನೋಹರ ನೋಟ ಕಾಣಲು ಸಿಗುವುದು. ಡೋನಾ ಪಾಲ್ ಸುಂದರ ಸ್ಥಳ. ಮಾರ್ಮಗೋವಾ ಬಂದರು ಚೆನ್ನಾಗಿದೆ. ಆರ್ವೆಲಂ ಜಲಪಾತ ನಯನಮನೋಹರವಾಗಿದೆ. ಮಾಯಂ ಸರೋವರ ಸುಂದರವಾಗಿದೆ. ಆದಿಲ್ ಶಾಹನ ಅರಮನೆ 'ಇಡಲ್ ಕಾವ್ಹೋ' ಭವ್ಯ ಕಟ್ಟಡವನ್ನು ನವೀಕರಿಸಿ ಅದಕ್ಕೊಂದು ಹೊಸರೂಪ ಕೊಟ್ಟು ಅದು ಈಗ ಗೋವಾದ ಸಚಿವಾಲಯವಾಗಿ ಮಾರ್ಪಟ್ಟಿದೆ. ಸೇಂಟ ಕೆಥೆಡ್ರಿಲ್ ಚರ್ಚು ಜಗತ್ತಿನ ದೊಡ್ಡ ಚರ್ಚುಗಳಲ್ಲೊಂದಾಗಿದೆ. ಇಲ್ಲಿಯ ಪ್ರತಿಯೊಂದು ತಾಣವೂ ಸುಂದರವಾಗಿದ್ದು ಪ್ರೇಕ್ಷಕರನ್ನು ಕೈಬೀಸಿ ಕರೆಯುತ್ತದೆ.

ಮಧ್ಯಮ ವರ್ಗದ ಪಾಶ್ಚಾತ್ಯ ಪ್ರವಾಸಿಗಳಿಂದಾಗಿಯೇ ಗೋವಾದ ಅಸಂಖ್ಯಾತ ಮಧ್ಯಮ ವರ್ಗ ಹಾಗೂ ಕೆಳವರ್ಗದ ಜನರ ಉದರ ನಿರ್ವಹಣೆ ಆಗುತ್ತದೆ. ಶ್ರೀಮಂತ ವರ್ಗದವರಿಗಾಗಿ ಅತೀ ಹೆಚ್ಚು ಶುಲ್ಕ ಪಡೆಯುವ ದುಬಾರಿ ಹೋಟೇಲುಗಳಿವೆ. ಅಲ್ಲಿ ತಂಗುವ ವಿದೇಶಿ ಯಾತ್ರಿಗಳ ಹಣದ ಬಹುಪಾಲು ಸರಕಾರಕ್ಕೆ ಸೇರುತ್ತದೆ.

ಗೋವಾಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮೇಲೆ ಅಲ್ಲಿ ಜನಸಂಖ್ಯೆ ದಿಢೀರ ಹೆಚ್ಚಾಗಿದೆ. ಅಲ್ಲಿನ ಆರ್ಥಿಕ ಪ್ರಗತಿಗೆ ಮುಖ್ಯ ಕಾರಣವಾಗಿದ್ದ ಕಬ್ಬಿಣದ ಅದುರಿನ ಗುಡ್ಡೆಗಳು ಕಣ್ಮರೆಯಾಗುತ್ತಿವೆ. ರಸಗೊಬ್ಬರ ಕಾರ್ಖಾನೆಯಿಂದಾಗಿ ಆಗಲೇ ಜಲಮಾಲಿನ್ಯ, ಹವಾಮಾಲಿನ್ಯ ಹೆಚ್ಚಾಗಿದ್ದು ಹೊಸ ಉದ್ದಿಮೆಗಳ ಸ್ಥಾಪನೆಗೆ ವಿರೋಧ ಬರುತ್ತಿದೆ. ಈ ಎಲ್ಲ ಬಿಕ್ಕಟ್ಟುಗಳ ಮಧ್ಯೆಯೂ ಪ್ರವಾಸೋದ್ಯಮ ಪ್ರಮುಖ ಉದ್ದಿಮೆಯಾಗಿ ಬೆಳೆಯುತ್ತಲಿದೆ. ಅಲ್ಲಿಯ ಜನರ ವಿಶಿಷ್ಟ ಸಂಸ್ಕೃತಿಯು ಇಂದಿಗೂ ಪ್ರಮುಖ ಪ್ರವಾಸೀ ಆಕರ್ಷಣೆಯಾಗಿ ಉಳಿದಿದೆ.

**---ಶ್ರೀಮತಿ ಸುಮಿತ್ರಾ ಶಾನಭಾಗ.**

# ಭಕ್ತಿಯಲಿ ಭಾಗಣ್ಣ

---ಕೃಷ್ಣ. ಹುನಗುಂದ.

"ಮೂರು ನಾಮಗಳ ಧರಿಸಿದ ಕಾರಣವೇನು
ಸಾರಿ ಪೇಳಲೋ ಈಗಲೇ
ಶ್ರೀ ರಮಾಪತಿ ಶ್ರೀನಿವಾಸ ವೆಂಕಟರಮಣ
ಯಾರು ಇಟ್ಟರು ನಿನಗೆ ಮೂರು ನಾಮಗಳ"

ಈ ಮೇಲಿನ ವಿನೋದ, ವ್ಯಂಗ್ಯವಾದ ಕೃತಿಯನ್ನು ರಚಿಸಿದವರು;-- ಗೋಪಾಲದಾಸರು. ಈ ಕೃತಿಯಲ್ಲಿ ವಿನೋದ ಪೂರ್ವಕವಾಗಿ ತಿರುಪತಿಯ ಶ್ರೀನಿವಾಸದೇವರ ಸಖನಂತೆ ಅಣಕವಾಡಿದ್ದಾರೆ. ಈ ತರಹದ ವ್ಯಂಗ್ಯವನ್ನು ಪರಮಾತ್ಮನ ಅತ್ಯಂತ ಹತ್ತಿರದ ಭಕ್ತರಿಗಲ್ಲದೇ ಇನ್ನಾರಿಗೆ ಮಾಡಲು ಸಾಧ್ಯ? ಈ ಮೇಲಿನ ಹಾಡಿನ ಒನೇ ನುಡಿಯಲ್ಲಂತೂ ಗೋಪಾಲದಾಸರು ತಿರುಪತಿಯ ಶ್ರೀನಿವಾಸ ದೇವರ ಹಣೆಯ ಮೇಲಿರುವ ಮೂರುನಾಗಳಲ್ಲಿ ಆಧ್ಯಾತ್ಮಿಕ ತತ್ವದ ಸಾರವನ್ನೇ ತುಂಬಿದ್ದಾರೆ. ಆ ಸಾಲುಗಳು--

ಮೂರುಲೋಕಗಳಿಹವು,
ಮೂರು ರೂಪನು ನಾನು
ಮೂರು ಮಾಳ್ಪೆನು ಜಗವ ಮೂರುಗುಣದಿ
ಮೂರು ತಾಪವ ಗೆದ್ದ ಮಾರ್ಗದಿ ಭಜಿಸೆ
ಪಾರು ಮಾಡುವೆನೆಂದು ತೋರುವ ಬಗೆಯೋ?

ಇಲ್ಲಿ ಆಂತರಿಕಾರ್ಥವೇ ಅತ್ಯಂತ ವೈಶಿಷ್ಟವಾದದ್ದು. ಈ ನುಡಿಯ ಭಾವಾರ್ಥ ಮೂರು ಲೋಕಗಳು -- ಸ್ವರ್ಗ, ಮರ್ತ್ಯ, ಪಾತಾಳಗಳು ಮೂರು ರೂಪಗಳು:-- ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ (ಪರಮಾತ್ಮ ಅನಂತರೂಪಿಯೂ ಹೌದು). ಮೂರು ಮಾಳ್ಪೆ :-- ಸೃಷ್ಟಿ, ಸ್ಥಿತಿ, ಲಯ. ಮೂರು ಗುಣ :-- ಸತ್ವ, ರಜಸ್ಸು, ತಮಸ್ಸು. ಮೂರು ತಾಪ --ಆದಿ ದೈವಿಕ, ಆದಿ ಭೌತಿಕ, ಆಧ್ಯಾತ್ಮಿಕ

--ಹೀಗೆ ಇವುಗಳ ಒಳಅರ್ಥವನ್ನೇಗೂಢವಾಗಿಟ್ಟು ಗೋಪಾಲದಾಸರು ತಮ್ಮ ಕೃತಿರಚನೆಯನ್ನು ಮಾಡಿದ್ದಾರೆ. ಹಾಗೆ ನೋಡಿದರೆ ಪುರಂದರದಾಸರು ಎಷ್ಟು ಸರಳ ರೀತಿಯಲ್ಲಿ (ಕೆಲವೊಂದನ್ನು ಬಿಟ್ಟು) ಪದ್ಯ, ಸುಳಾದಿಗಳನ್ನು ರಚಿಸಿದರೋ, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಅಷ್ಟೇ ಗಡಚಾಗಿ ಸಾಹಿತ್ಯ ರಚನೆ ಮಾಡಿದರು. ಅದರಲ್ಲಂತೂ ಗೋವಾಲದಾಸರ ಸಾಹಿತ್ಯವನ್ನು ಕಬ್ಬಿಣದ ಕಡಲೆ ಎನಿಸುವಷ್ಟು ಜನಜನಿತವಾಗಿವೆ.

ತಂದೆ ಮುರಾರಿ, ತಾಯಿ ವೆಂಕಮ್ಮನವರ ಉದರದಲ್ಲಿ ಕ್ರಿ. ಶ. ೧೭೨೧ ರಂದು ಮೊಸರುಕಲ್ಲಿನಲ್ಲಿ (ರಾಯಚೂರು ಜಿಲ್ಲಾ, ದೇವದುರ್ಗ ತಾಲೂಕು) ಜನಿಸಿದ ಗೋಪಾಲದಾಸರ ಮುಂಚಿನ ಹೆಸರು ಭಾಗಣ್ಣ. ಹಿರಿಯ ಮಗ. ಈತನಿಗೆ ಮೂವರು ತಮ್ಮಂದಿರು. ಸುಖದ ಸಂಸಾರ, ಆದರೆ ತಂದೆಯ ಮರಣಾನಂತರ ಇದ್ದ ಚೂರು ಆಸ್ತಿಯೂ ಕರಗುತ್ತಾ ಬರಲು, ವೆಂಕಮ್ಮ ಮಕ್ಕಳ ಸಹಿತವಾಗಿ ಸಂಕಾಪುರಕ್ಕೆ ಬಂದಳು. ಮನೆಮನೆಗೆ ಈಕೆಯ ಮಕ್ಕಳು ಮಧುಕರಿ ಹೋಗಿ, ಅತೀ ಕಷ್ಟದ ಜೀವನ ನಡೆಸಿದಳು. ಇಲ್ಲಿ ಇವರು ಆರೇಳು ವರ್ಷಗಳನ್ನು ಕಳೆದರು. ಪ್ರಾಯಃ ಆಗಲೇ ಅಲ್ಲಿಯ ಶಾನುಭೋಗರಾದ ಗುಂಡಪ್ಪನವರು, ತಮ್ಮ ಮಕ್ಕಳ ಉಪನಯನದ ಜತೆಯೇ ಭಾಗಣ್ಣನ -- ಉಪನಯನವನ್ನೂ ಮಾಡಿರಬೇಕೆಂದು ಕಂಡುಬರುತ್ತದೆ. ನಂತರ ವೆಂಕಮ್ಮ ತನ್ನೆಲ್ಲ ಮಕ್ಕಳೊಂದಿಗೆ ಸಂಕಾಪುರದಿಂದ ಅತಕೂರು ಎಂಬ ಗ್ರಾಮಕ್ಕೆ ಬಂದು, ಅಲ್ಲಿದ್ದ ಒಂದು ಪಾಳು ಗುಡಿಯಲ್ಲಿ ಮಕ್ಕಳೊಂದಿಗೆ ವಾಸ್ತವ್ಯ ಹೂಡಿದಳು. ಅಲ್ಲಿಯೂ ಮಧುಕರಿ ವೃತ್ತಿಯನ್ನೇ ಈ ಬಡಸಂಸಾರ ಮುಂದುವರಿಸಿತು. ಇಲ್ಲಿ



ಹರಿದಾಸ ಸಾಹಿತ್ಯದ ಪ್ರಮುಖ ಘಟ್ಟ ಶ್ರೀಪಾದರಾಜರಿಂದ ಆರಂಭವಾಗಿ, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರಿಂದ ವ್ಯಾಪಕ ಪ್ರಸಾರ ಪಡೆದರೂ, ನಂತರದ ಒಂದು ಶತಮಾನದವರೆಗೂ ಆ ಸಾಹಿತ್ಯವಾಹಿನಿ ತಟಸ್ಥವಾಗಿತ್ತು. ಆದರೆ ಅದು ಪುನಃ ವಿಜಯದಾಸರಿಂದ ಚಾಲನೆ ಪಡೆದು ಮತ್ತೆ ಉನ್ನತಿಯನ್ನು ಪಡೆಯಿತು. ಈ ಹರಿದಾಸ ಸಾಹಿತ್ಯದ ದ್ವಿತೀಯ ಘಟ್ಟದಲ್ಲಿ ವಿಜಯದಾಸರ ಶಿಷ್ಯರೂ, ಭಕ್ತಿಯಲಿ ಭಾಗಣ್ಣ ಬಿರುದಾಂಕಿತರಾದ ಗೋಪಾಲದಾಸರೂ ಒಬ್ಬರು. ಇದೇ ಪುಷ್ಯ ಕೃಷ್ಣಪಕ್ಷದ ಅಷ್ಟಮಿ (ಜನವರಿ ೧೫, ೧೯೯೩) ಯಂದು ಅವರ ಪುಣ್ಯತಿಥಿ. ಅದಕ್ಕಾಗಿ ಈ ಲೇಖನ.

ಉಪನಯನವಾಗಿದ್ದ ಭಾಗಣ್ಣ, ಸಂಧ್ಯಾವಂದನೆ, ಅಗ್ನಿಕಾರ್ಯ ಮುಂತಾದವುಗಳನ್ನು ಅತ್ಯಂತ ವಿಧಿವತ್ತಾಗಿ, ಶ್ರದ್ಧಾಪೂರ್ವಕವಾಗಿ ನಡೆಯಿಸಿಕೊಂಡು ಬಂದ. ಗಾಯತ್ರೀ ಮಂತ್ರದ ಫಲ ಎಂಥಹುದು, ಅವರ ಪರಿಣಾಮ ಯಾವ ರೀತಿಯದು ಎಂಬುವುದಕ್ಕೆ ಭಾಗಣ್ಣ ಸ್ಪಷ್ಟ ನಿದರ್ಶನ. ಗಾಯತ್ರಿ ಮಂತ್ರವ ಜಪ ತಪಾನುಷ್ಠಾನದಿಂದ ಭಾಗಣ್ಣನಿಗೆ ವಾಕ್‌ಸಿದ್ಧಿ ಯಾಯಿತು. ಅಂದ ಮಾತುಗಳೆಲ್ಲ ನಿಜವಾಗತೊಡಗಿದವು. ಜನರಿಗೆಲ್ಲ ಭವಿಷ್ಯ ಹೇಳಲು ಭಾಗಣ್ಣ ತೊಡಗಿದಂದಿನಿಂದ, ಭಾಗಣ್ಣನ ಭವಿಷ್ಯವೂ ಬದಲಾಗತೊಡಗಿತು. ಕಾವ್ಯ ಶಕ್ತಿಯ ಚಿಲುಮೆ ಭಾಗಣ್ಣನಲ್ಲಿ ಉಕ್ಕಿಹರಿಯತೊಡಗಿತು. ಅಂತೆಯೇ ಭಾಗಣ್ಣ ಕವಿಕುಲತಿಲಕನಾದ. ಇದು ಈಗಿನ ಆಂಧ್ರಪ್ರಾಂತದ ಗದ್ವಾಲ ಸಂಸ್ಥಾನದ ರಾಜ ರಾಮಭೂಪಾಲನ ಕಿವಿಗೂ ಬಿದ್ದು, ಆತನೂ ಭವಿಷ್ಯಕ್ಕಾಗಿ ಭಾಗಣ್ಣನ ಬಳಿ ಬಂದ.

ಭಾಗಣ್ಣನ ಅಮೃತಮಯ ಮಾತುಗಳಿಂದ ಮಾರುಹೋದ ರಾಜ ಅನೇಕ ಕುದುರೆಗಳನ್ನು, ಭೂಮಿ, ಸಂಪತ್ತನ್ನು ಶ್ರದ್ಧಾಭಕ್ತಿಯಿಂದ ನೀಡಿದ. ಐಶ್ವರ್ಯ ಹಾಗೂ ಸುಖದ ಅಮಲು ಭಾಗಣ್ಣನ ನೆತ್ತಿಗೇರಲಿಲ್ಲ. ಒಳಗಿನ ಮನಸ್ಸು ಆಧ್ಯಾತ್ಮಿಕದ ಕಡೆಗೇ ಎಳೆಯುತ್ತಿತ್ತು. ಆಗಲೇ "ವೆಂಕಟ

ಕೃಷ್ಣ" ಎಂಬ ಅಂಕಿತದಿಂದ ಪದಗಳನ್ನು ರಚಿಸಿ ಹಾಡುತ್ತಿದ್ದ. ಈ ಅವಧಿಯಲ್ಲಿಯೇ -- ಪುರಂದರದಾಸರಿಂದ (ಸ್ವಪ್ನದಲ್ಲಿ) ಅಂಕಿತ ಪಡೆದು ಅಪರೋಕ್ಷ ಜ್ಞಾನಿಗಳಾದ ವಿಜಯದಾಸರ ಭೇಟ್ಟಿಯಾಯಿತು. ದೊಡ್ಡವರ ಭೇಟ್ಟಿಯೂ, ಜೀವನವೆಂಬ ಪಯಣದಲ್ಲಿ ಬಾಳ ಪಥವನ್ನೇ ಬದಲಿಸುತ್ತದೆ. ಅಂತೆಯೇ ವಿಜಯದಾಸರು ಭಾಗಣ್ಣನನ್ನು ಭೇಟ್ಟಿಯಾದಾಗ, ಭಾಗಣ್ಣ ದಾಸ ದೀಕ್ಷೆಗೆ ಹಂಬಲಿಸಿದ. ಆಗ ವಿಜಯದಾಸರು--

ಗೋಪಾಲವಿಠಲ ನಿನ್ನ ಪೂಜೆ ಮಾಡುವೆನು
ಕಾಪಾಡೋ ಈ ಮಾತನು...............
..........................................................
ಅಂಕಿತವ ನಾನಿತ್ತೆ ನಿನ್ನ ಪ್ರೇರಣೆಯಿಂದ
ಕಿಂಕರಗೆ ಲೌಕಿಕದ ಡೊಂಕು ನಡತೆಯ ಬಿಡಿಸಿ
ಮಂಕು ಜನುಮ ಜನುಮದಲಿದ್ದ
ಪಂಕವಾರವ ತೊಲಗಿಸಿ
ಶಂಕೆ ಪುಟ್ಟದಂತೆ ಕಾವ್ಯಗಳ ಪೇಳಿದುದು
ಸಂಕಟಗಳಟ್ಟಿ ದಾರಿಗೆ ವೆಂಕಟ ಕೃಷ್ಣನು ನೀನೆ
'ವಿಜಯವಿಠಲ' ಯೆಂದು
ಅಂಕುರವು ಪಲ್ಲೈಸಿ ಫಲಪ್ರಾಪ್ತಿಯಾಗಲೋ

--ಎಂದು "ಗೋಪಾಲವಿಠಲ" ಎಂಬ ಅಂಕಿತವನ್ನು ನೀಡಿದರು. (ಈ ಘಟನೆ ಆದವಾನಿಯಲ್ಲಿ ವ್ಯಾಸರಾಯರಿಂದ ಪ್ರತಿಷ್ಠಿತವಾದ ಹನುಮಂತ ದೇವರ ಗುಡಿಯಲ್ಲಿ ನಡೆಯಿತು ಎಂದು ಪ್ರತೀತಿ). ಇಲ್ಲಿ ಬರುವ "ವೆಂಕಟಕೃಷ್ಣನು ನೀನೇ ವಿಜಯವಿಠಲ" ಎಂಬ ಸಾಲು ಭಾಗಣ್ಣ ದಾಸದೀಕ್ಷೆಗೆ ಮೊದಲೇ ಕೃತಿರಚನೆಗೆ ತೊಡಗಿದ್ದ ಎಂಬುದನ್ನು ಪುಷ್ಟೀಕರಿಸುತ್ತದೆ. ಹೀಗೆ "ಗೋಪಾಲದಾಸರು" ಎಂಬ ದಾಸತ್ವ ವಹಿಸಿ ವಿಜಯದಾಸರ ಪ್ರಮುಖ ಶಿಷ್ಯರಾದರು. ತಮ್ಮ ಮನೆತನದಲ್ಲಿ ತಾವು ಮಾತ್ರ ಉದ್ಧಾರವಾದರೆ ಸಾಲದು ತಮ್ಮ ಸೋದರರೂ ಸಾಧನೆ ಮಾಡಲಿ, ತನ್ಮೂಲಕ ಭಗವಂತನ ಅನುಗ್ರಹಕ್ಕೆ ಪಾತ್ರರಾಗಲಿ, ಎಂಬ ಉದ್ದೇಶದಿಂದ, ತಮ್ಮ ಮೂವರೂ ತಮ್ಮಂದಿರಿಗೂ ಕೂಡ ತಾವೇ ವರದಗೋಪಾಲ ವಿಠಲ, ಗುರುಗೋಪಾಲ ವಿಠಲ, ತಂದೆ ಗೋಪಾಲ ವಿಠಲ ಎಂಬ ಅಂಕಿತ ನೀಡಿ ಅವರನ್ನೂ ಹರಿದಾಸರ ಬಳಗಕ್ಕೆ ಸೇರಿಸಿದರು. ಇವರೂ ಕೂಡ ಅನೇಕ ದೇವರ ನಾಮಗಳನ್ನು ರಚಿಸಿ ಖ್ಯಾತರಾದರು.

ಆಗ ಉತ್ತರಾದಿ ಮಠದ ಪೀಠಾಧಿಪತಿಗಳಾಗಿ ವಿರಾಜಮಾನರಾಗಿದ್ದ, ಅಪರೋಕ್ಷ ಜ್ಞಾನಿಗಳೂ, ಪ್ರಕಾಂಡ ಪಂಡಿತರೂ, ನಡುರಾತ್ರಿಯಲ್ಲಿ ಸೂರ್ಯನ ದರ್ಶನ ಮಾಡಿಸಿದ ಮಹಾಮಹಿಮರೂ (ಇರುಳು ಕಾಲಿದಲ್ಲಿ ತರಣಿಯ ತೋರಿದ...... ಶ್ರೀ ಸತ್ಯಬೋಧ--ಜಗನ್ನಾಥದಾಸರು) ಆದ ಶ್ರೀ ಶ್ರೀ ಸತ್ಯಬೋಧ ಸ್ವಾಮಿಗಳು ಒಮ್ಮೆ ಗೋಪಾಲದಾಸರು, ಮತ್ತವರ ತಮ್ಮಂದಿರನ್ನು ಪರೀಕ್ಷಿಸಲು (ರಾಯಚೂರಿನಲ್ಲಿ) ಪ್ರತ್ಯೇಕ ಕೊಠಡಿಗಳಲ್ಲಿ ಕೂಡಿಸಿ ನೀವು ಮೂವರು ಒಂದೇ ಹಾಡನ್ನು ರಚಿಸಿ ಎಂದು ಆಜ್ಞಾಪಿಸಿದರಂತೆ. ಆಗ---

ಮಾರಮದಘನಸಮೀರ ಮದ್ವಮತೋ
ದ್ಧಾರ ಶುಭಗುಣ ಸಾಗರ, ಧೀರ
ಗುರುಸತ್ಯಬೋಧಾರ್ಯ ಹರಿಕರುಣದಲಿ
ಪರವರ್ಗವ ಗೆಲಿದು ಧಾರುಣಿಯೊಳು ಮೆರೆದೆ

ಎಂಬ ಪದವನ್ನು, ಪಲ್ಲವಿ, ಅನುಪಲ್ಲವಿ, ಹಾಗೂ ಕೊನೆಯ ನುಡಿಯನ್ನು ಗೋಪಾಲದಾಸರು, ಒಂದು ಮತ್ತು ಎರಡನೆಯ ನುಡಿಯನ್ನು ಅನುಕ್ರಮವಾಗಿ ಸೀನಪ್ಪದಾಸರು (ವರದಗೋಪಾಲವಿಠಲ), ದಾಸಪ್ಪ ದಾಸರು (ಗುರು ಗೋಪಾಲ ವಿಠಲ) ಮಾಡಿದರಂತೆ. ರಂಗಪ್ಪದಾಸರು (ತಂದೆ ಗೋಪಾಲ ವಿಠಲ) ಈ ಸಮಯದಲ್ಲಿ ಭಾಗವಹಿಸಿರಲಿಲ್ಲವೆಂದು ತೋರುತ್ತದೆ. ಈ ಮೂವರ ಅಪರೋಕ್ಷಜ್ಞಾನವನ್ನು ಕಂಡ ಶ್ರೀ ಸತ್ಯಬೋಧರು, ನೀವು ಮೂವರು, ನಮ್ಮ ದ್ವೈತ ಮತದ ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳು ಎಂದು ಹರಿಸಿಕೊಂಡಾಡಿದರಂತೆ.

ಗೋಪಾಲದಾಸರ ಜೀವನದ ಪ್ರಮುಖ ಘಟ್ಟ, ಮುಂದೆ ಜಗನ್ನಾಥದಾಸರಿಗೆ, ತಮ್ಮ ಜೀವಿತದಲ್ಲಿಯ ನಾಲ್ವತ್ತು ವರ್ಷಗಳನ್ನು ಆಯುರ್ದಾನ ಮಾಡಿದ್ದು. ಆಧುನಿಕ ಯುಗದಲ್ಲಿ ಇದು ಅನುಮಾನಾಸ್ಪದವೆಂದು ಹೇಳಬಹುದು. ಆದರೆ ಪಾರಮಾರ್ಥಿಕ ಹಿನ್ನೆಲೆಯಲ್ಲಿ ಇದು ಸತ್ಯವೆಂದು ಹೇಳಬಹುದು. ಯಾಕೆಂದರೆ ಪುರಾಣಾದಿಗಳನ್ನು ನೋಡಿದಾಗ ಪರಮಾತ್ಮ ಕ್ರಿಮಿಯಿಂದ ರಾಜ್ಯವಾಳಿಸಿದ ಎಂಬ ಉಲ್ಲೇಖವಿದೆ. ಒಟ್ಟಿನಲ್ಲಿ ಭಗವಂತನ ಅಚಿಂತ್ಯಾದ್ಭುತ ಶಕ್ತಿ ಎಂದು ಮಾತ್ರ ಹೇಳಬಹುದು. ವಿಜಯದಾಸರ ಆಹ್ವಾನವನ್ನು ತಿರಸ್ಕರಿಸಿದ್ದ ಭಾವೀ ಜಗನ್ನಾಥದಾಸರು -- ಉದರಶೂಲೆಯಿಂದ ಬಹಳಷ್ಟು ಬಾಧೆ ಪಡುತ್ತಿರುವಾಗ ವಿಜಯದಾಸರ ಅಪ್ಪಣೆಯಂತೆ "ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯಮಾಡೋ ಸಣ್ಣವನು ಇವ ಕೇವಲ" ಎಂಬ ಮಂತ್ರಪುರಸ್ಸರವಾಗಿ ಹಾಡಿ ಜಗನ್ನಾಥದಾಸರಿಗೆ ಜೋಳದ ಭಕ್ಕರಿಯನ್ನು ತಿನ್ನಲು ಕೊಟ್ಟು, ಅವರ ಉದರಶೂಲೆಯನ್ನು ಗುಣಪಡಿಸಿದರು. ಜಗನ್ನಾಥದಾಸರು, ಗೋಪಾಲದಾಸರಿಂದ ಪಡೆದ ೪೦ ವರ್ಷಗಳ ಆಯುಸ್ಸಿನಲ್ಲಿಯೇ ಕನ್ನಡ ಸಾಹಿತ್ಯದ ಮೇರು ಕೃತಿ "ಶ್ರೀಮದ್ಧರಿಕಥಾಮೃತಸಾರ"ವನ್ನು ರಚಿಸಿದುದು. ಹೀಗೆ ಅಪರೋಕ್ಷವಾಗಿ ಇಂಥಾ ಮಹತ್ತರ ಕೃತಿಗೆ ಕಾರಣರಾದವರು ಗೋಪಾಲದಾಸರು ಪರಮಾತ್ಮನಲ್ಲಿ ಭಕ್ತನಾದವನು ಏನು ಬೇಡಬೇಕು ಎಂಬುದನ್ನು--

ಏನು ಬೇಡಲಿ, ನಿನ್ನ ಬಳಿ ಬಂದು,
ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ,

--ಎಂಬ ಸುಂದರ ಪದ್ಯದಲ್ಲಿ ಐಹಿಕಸುಖಕ್ಕೆ ಮರುಳಾಗದೇ, ಪರಮಾತ್ಮನಲ್ಲಿ ನಿಶ್ಚಲ ಭಕ್ತಿ, ಈಶದಾಸ ಭಾವಗಳೇ ಪ್ರಧಾನವಾಗಿ ಬೇಡುವಂಥವುಗಳು ಎಂದು ತಿಳಿಹೇಳಿದ್ದಾರೆ. ಇದುವರೆಗೂ ಗೋಪಾಲದಾಸರು ರಚಿಸಿದ ಕೃತಿಗಳು ಎಷ್ಟು ಎಂಬುದನಿಖರವಾಗಿ ತಿಳಿದು ಬಂದಿಲ್ಲ. ಸುಮಾರು ೧೭೫--೨೦೦ ರವರೆಗೂ ಪದಗಳು, ಸುಳಾದಿಗಳು, -- ಉಗಾಭೋಗಗಳು ಸಿಕ್ಕಿವೆ. ಯಾಕೆಂದರೆ ಹರಿದಾಸ ಸಾಹಿತ್ಯವು ಗ್ರಂಥಸ್ಥವಾಗಿ ಉಳಿದುಕೊಂಡು ಬಂದದ್ದಕ್ಕಿಂತ ಬಾಯಿಂದ ಬಾಯಿಗೆ ಹರಿದು ಬಂದದ್ದೇ ಹೆಚ್ಚು.

ಗೋಪಾಲದಾಸರು ಸಾಹಿತ್ಯ ರಚನೆಯಲ್ಲಿ ಎಷ್ಟು ಸಿದ್ಧಹಸ್ತರೋ, ಅಷ್ಟೇ ಚಿತ್ರ ಕಲೆಯಲ್ಲೂ ನೈಪುಣ್ಯತೆಯನ್ನು ಪಡೆದಿದ್ದರು ಎನ್ನುವುದಕ್ಕೆ ದಾಸಸಾಹಿತ್ಯದ ಮಹಿಳಾಮಣಿಗಳಲ್ಲೊಬ್ಬಳಾದ ಹೆಳವನಕಟ್ಟೆ ಗಿರಿಯಮ್ಮ ರಚಿಸಿದ ರಂಗೋಲಿಯಲ್ಲೇ ಕೃಷ್ಣಮೂರ್ತಿಯನ್ನು ತೋರಿಸಿಕೊಟ್ಟದ್ದೇ ಸಾಕ್ಷಿ. ಪೂರ್ವಾಶ್ರಮದಲ್ಲಿ ಶುದ್ಧಪೋಲಿಯಾಗಿದ್ದ ವ್ಯಾಸತತ್ವಜ್ಞರನ್ನು ಸನ್ಮಾರ್ಗಕ್ಕೆ ತಂದದ್ದು, ಶ್ರೀನಿವಾಸಾಚಾರ್ಯರನ್ನು ಜಗನ್ನಾಥದಾಸರಾಗಿ ಪರಿವರ್ತಿಸಿದ್ದು, ಗೋಪಾಲದಾಸರ ವ್ಯಕ್ತಿತ್ವದ ಹಿರಿಮೆ ಎಷ್ಟು ಅಗಾಧವಾದದ್ದು ಎಂಬುದು ಗೊತ್ತಾಗುತ್ತದೆ.

ಒಟ್ಟಿನಲ್ಲಿ ಬದುಕಿನ ನಲ್ವತ್ತು ವರ್ಷಗಳಲ್ಲಿಯೇ ಅಗಾಧವಾದ ಸಾಹಿತ್ಯ ರಚನೆ ಮಾಡಿ, ಚಿತ್ರಭಾನು ಸಂವತ್ಸರದ ಪುಷ್ಯ ಕೃಷ್ಣ ಅಷ್ಟಮಿಯಂದು ಉತ್ತನೂರಿನಲ್ಲಿಯೇ ಸ್ವರ್ಗಸ್ಥರಾದರು. ಈಗಲೂ ಕೂಡ ಉತ್ತನೂರು ಮತ್ತು ವೇಣಿಸೋಮಪುರಗಳಲ್ಲಿ ಅವರು ವಾಸ ಮಾಡಿದ ಮನೆಗಳಿವೆ. ಉತ್ತನೂರಿನ ಮನೆಯಲ್ಲಿ ಈಗ ಏನೂ ಇಲ್ಲ. ಆದರೆ ಶಿಥಿಲವಾದ ತಂಬೂರಿ, ವಿಠಲ ಪ್ರತಿಮೆಗಳು -- (ದಾಸರು ಪೂಜೆ ಮಾಡುತ್ತಿದ್ದ) ಗದ್ವಾಲಿನ ಶ್ರೀ ವೆಂಕೋಬದಾಸರ ಮನೆಯಲ್ಲಿವೆಯಂತೆ. ಗೋಪಾಲದಾಸರು ಉಪದೇಶಿಸಿದ ಸಾರ -- ಹರಿಭಕ್ತಿ ಮಾಡಿ, ಈಶ ನೀನು ದಾಸ ನಾನು ಎಂಬ ಪ್ರಜ್ಞೆ ಸದಾ ಮನದಲ್ಲಿರಲಿ --ಎಂಬುದೇ ಆಗಿತ್ತು.

ಗೋಪ ಪ್ರಕರ ಸಂಕಾಶಂ
ಗೋಪಾಲಾರ್ಚನ ತತ್ಪರಂ
ಗೋದೇವ ವಂದ್ಯ ಪಾದಾಬ್ಜಂ
ಗೋಪಾಲಾಖ್ಯ ಗುರುಂ ಭಜೇ

* * * * *

# ಭಾರತದ ಭಾವೈಕ್ಯದ ಕುರುಹು

# ತುಲಸೀ ರಾಮಾಯಣ

---ಡಾ. ಆರ್. ರಾಮಕೃಷ್ಣ.

ಭಾರತೀಯ ಮಹಾಕಾವ್ಯಗಳ ಪೈಕಿ ಗೋಸ್ವಾಮಿ ತುಳಸೀದಾಸರ (ಕ್ರಿ.ಶ. ೧೫೩೨ -- ೧೬೨೩) ರಾಮಚರಿತಮಾನಸವೂ ಒಂದು. ಅವಧಿ ಬಾಷಾಸುಂದರಿಯ ಅಮೂಲ್ಯಕಂಠಾಭರಣವೆನಿಸಿರುವ ಈ ಕಾವ್ಯ ಮಾನಸವೆಂದೇ ಹೆಸರಾಗಿದೆ. ಅನೇಕ ಕೃತಿಗಳಿಗೆ ಮೂಲ ಆಕರವಾಗಿದೆ. ಸ್ಫೂರ್ತಿಯ ಸೆಲೆಯನ್ನು ಒದಗಿಸಿದೆ. ಭಾರತೀಯರ ಬದುಕಿನಲ್ಲಿ ಆಳವಾಗಿ ಬೇರು ಬಿಟ್ಟಿರುವ ಈ ಕಾವ್ಯ ಭಾರತೀಯ ಭಾವೈಕ್ಯತೆಯ ಒಂದು ಕುರುಹು. ರಾಮಚರಿತ ಮಾನಸವು ಮಧ್ಯಯುಗದ ಭಾರತೀಯ ಇತಿಹಾಸವನ್ನು ಪ್ರತಿಬಿಂಬಿಸುವ, ಸಮಕಾಲೀನ ಇತಿಹಾಸದ ಧಾರ್ಮಿಕ ಸಂಘರ್ಷಣವನ್ನು ಪ್ರತಿಫಲಿಸುವ ಕಾವ್ಯ. ಇದು ಹಿಂದೂಧರ್ಮ ಮತ್ತು ಹಿಂದೂಸಂಸ್ಕೃತಿ ಲುಪ್ತವಾಗಿದ್ದ ದಿನಗಳಲ್ಲಿ ಭಾರತೀಯ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಿತು. ಹಿಂದೀ ಸಾಹಿತ್ಯದ ಮಧ್ಯಯುಗಕ್ಕೆ ತುಳಸೀದಾಸರೇ ಸಂಪೂರ್ಣ ಜವಾಬ್ದಾರರಾದ ಕವಿ ಎಂಬ ಮಾತಿಗೆ, ರಾಮಚರಿತಮಾನಸದಲ್ಲಿ ಪ್ರತಿಪಾದಿತವಾಗಿರುವ ಆದರ್ಶ ಸಮನ್ವಿತ ಸಿದ್ಧಾಂತಗಳೇ ಸಾಕ್ಷಿ. ಸಗುಣ-- ನಿರ್ಗುಣ, ಭಕ್ತಿಜ್ಞಾನಗಳ ಸಮನ್ವಯ ಮಾಡಿ ಹಲವಾರು ವಿಷಮ ಸಮಸ್ಯೆಗಳನ್ನು ಈ ಕಾವ್ಯದಲ್ಲಿ ಪರಿಹರಿಸಲು ಪ್ರಯತ್ನ ಮಾಡಲಾಗಿದೆ. ಈ ಕಾವ್ಯದಲ್ಲಿ ಚಿತ್ರಿತವಾಗಿರುವ ಕಾವ್ಯಾತ್ಮಕ ಪ್ರಸಂಗಗಳು ಒಂದು ದೃಷ್ಟಿಯಲ್ಲಿ ಸಮಗ್ರಭಾರತೀಯ ಸಂಸ್ಕೃತಿಯ ಅಂಗಗಳೆಂಬ ರೀತಿಯಲ್ಲಿವೆ.

ರಾಮೋಪಾಸಕರಲ್ಲಿ ತುಳಸೀದಾಸರು ಅಗ್ರಗಣ್ಯರು. ರಾಮಕಥೆಯ ಮೂಲಕ ಭಾರತೀಯ ಸಂಸ್ಕೃತಿಯನ್ನು ಧಾರ್ಮಿಕ ಹಾಗೂ ಸಾಮಾಜಿಕ ದೃಷ್ಟಿಯಿಂದ ವಿವೇಚಿಸುವ ಪ್ರಯತ್ನ ಮಾಡಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಿ ದೊರೆಯದ ಹಲವಾರು ಸಂಗತಿಗಳು ರಾಮಚರಿತ ಮಾನಸದಲ್ಲಿ ಸಿಕ್ಕುವುದರಿಂದ ಶ್ರೀರಾಮನಕಥೆಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಬದುಕಿನ ವಿವಿಧ ಮಜಲುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ ಈ ಮಹಾಕಾವ್ಯದಲ್ಲಿ. ಶ್ರೀರಾಮನ ಆದರ್ಶ ಪೂರ್ಣ ಭವ್ಯ ಜೀವನದ ಹೊಂಬೆಳಕಿನಲ್ಲಿ ಈ ಕಾವ್ಯ ಕಂಗೊಳಿಸುತ್ತದೆ. ತುಳಸೀಧಾಸರು ತಮ್ಮ ಕಾವ್ಯದಲ್ಲಿ ರಾಮಕಥೆಯನ್ನು ಹೇಳುವಷ್ಟರಿಂದಲೇ ತೃಪ್ತರಾಗಿಲ್ಲ. ತಮ್ಮ ಜೀವಿತ ಕಾಲದಲ್ಲಿ ಪ್ರಚಲಿತವಿದ್ದ ಉನ್ನತ ದಾರ್ಶನಿಕ ತತ್ವಗಳನ್ನು ಸಾಮಾನ್ಯ ಜನರಿಗೂ ಗ್ರಾಹ್ಯವಾಗುವಂಥ ಶೈಲಿಯಲ್ಲಿ ಈ ಕಾವ್ಯ ರಚಿಸಿದ್ದಾರೆ. ಘಟನೆಗಳ ಸಂವಿಧಾನಕ್ಕಿಂತ ಪಾತ್ರನಿರೂಪಣೆಗೇ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದಾರೆ. ಪಾತ್ರ ನಿರೂಪಣೆಯಲ್ಲಿ ಲೋಕಕಲ್ಯಾಣದ ಭಾವನೆ ಅಭಿವ್ಯಕ್ತವಾಗಿದೆ. ತಾಯಿತಂದೆಯರ ಪ್ರೇಮ, ಸೋದರ ಪ್ರೇಮ, ಸ್ವಾಮಿಭಕ್ತಿ, ಗುರುಭಕ್ತಿ, ಧರ್ಮ, ಸತ್ಯ ನಿಷ್ಠೆಗಳು, ಪ್ರಜಾಪ್ರೀತಿ, ಪಾತಿವ್ರತ್ಯ ತ್ಯಾಗ, ದಯೆ, ಈಶ್ವರಭಕ್ತಿ -- ಮೊದಲಾದ ಉತ್ತಮಗುಣಗಳಿಂದ ಈ ಕಾವ್ಯದ ಎಲ್ಲ ಪಾತ್ರಗಳೂ ಸಮರ್ಥಮಾರ್ಗದರ್ಶಕಗಳಾಗಿವೆ.

ರಾಮಚರಿತಮಾನಸದ ವೈಶಿಷ್ಟ್ಯವೆಂದರೆ, ಈ ಕಾವ್ಯದಲ್ಲಿ ಉದ್ದಕ್ಕೂ ಕಾಣಿಸಿಕೊಳ್ಳುವ ಉನ್ನತ ಮಟ್ಟದ ನೈತಿಕದೃಷ್ಟಿ. ನೀತಿಬಾಹಿರವಾದ ಕಾಗೆಗಳಿಗೂ ಕೊಕ್ಕರೆಗಳಿಗೂ ಈ ಮಾನಸಸರೋವರದಲ್ಲಿ ಯಾವುದೇ ಕ್ರಿಮಿಕೀಟಗಳಾಗಲೀ ಕಪ್ಪೆಗಳಾಗಲೀ ಸಿಗುವುದಿಲ್ಲ ಎಂದು ತುಳಸೀದಾಸರೇ ಒಂದೆಡೆ ಹೇಳಿದ್ದಾರೆ. ವಾಲ್ಮೀಕಿ ರಾಮಾಯಣದ ಯಥಾರ್ಥಚಿತ್ರಣ, ಅಧ್ಯಾತ್ಮರಾಮಾಯಣದ ಧರ್ಮ ಮತ್ತು ಭಕ್ತಿ ಪ್ರಣವತೆ, ತುಳಸೀದಾಸರ ಭಕ್ತಿಭಾವನೆ ಹಾಗೂ ಆದರ್ಶಮಾನವನನ್ನು ಚಿತ್ರಿಸುವ ಮನೋಭಾವನೆ -- ಇವು ಅವರ ಪಾತ್ರರಚನೆಯಲ್ಲಿ ವಿಶೇಷ ಪ್ರಭಾವವನ್ನು ಬೀರಿರುವ ಅಂಶ. ಮರ್ಯಾದಾಪುರುಷೋತ್ತಮನಾದ ಕೌಸಲ್ಯಾನಂದನ, ಪತಿಪರಾಯಣಳಾದ ಪತಿವ್ರತಾಶಿರೋಮಣಿಯಾದ ಜನಕನಂದಿನಿ, ಸೋದರಪ್ರೇಮಿ ಮತ್ತು ತ್ಯಾಗಮೂರ್ತಿಗಳಾದ ಲಕ್ಷ್ಮಣ ಭರತ ಶತ್ರುಘ್ನರು, ಸತ್ಯವ್ರತನಾದ ದಶರಥ ಮಹಾರಾಜ, ಆದರ್ಶಸೇವಾಪರಾಯಣನಾದ ಹನುಮಂತ, ಆತ್ಮೋತ್ಸರ್ಗನಿಷ್ಠಳಾದ ಸುಮಿತ್ರೆ, -- ಈ ಒಂದೊಂದು ಪಾತ್ರವೂ ರಾಮಚರಿತಮಾನಸದಲ್ಲಿ ವಿಶಿಷ್ಟವಾಗಿ ಮೈದೋರಿವೆ.

ತುಳಸೀದಾಸರ ಶ್ರೀರಾಮ ಅಂಶಾವತಾರವಲ್ಲ. ಸ್ವಯಂ ಸಚ್ಚಿದಾನಂದ ಬ್ರಹ್ಮ. ತನ್ನ ಸಮಾಜದ ಸಕಲ ಸಂವೇದನೆಗಳಿಗೂ ಸ್ವರ ನೀಡಿರುವ ಪುರುಷೋತ್ತಮ. ದಲಿತರ ದುಃಖನಿವಾರಣೆಗೆ, ಪಾಪಿಗಳ ಉದ್ಧಾರಕ್ಕೆ, ಧೈರ್ಯ ಉತ್ಸಾಹಗಳಿಗೆ, ಆತ್ಮವಿಶ್ವಾಸಕ್ಕೆ 'ರಾಮ' ಒಂದು ಹೆಸರು. ತುಳಸೀದಾಸರು ರಾಮಾವತಾರಕ್ಕೆ ಜಯವಿಜಯರಿಗೆ ಋಷಿಗಳಿಂದ ಉಂಟಾದ ಶಾಪದ ವಿಮೋಚನೆ, ಜಲಂಧರನಿಗೆ ಸದ್ಗತಿ, ನಾರದಶಾಪ, ಶತರೂಪಳಿಗೆ ವರದಾನ, ಭಾನುಪ್ರತಾಪನಿಗೆ ಬ್ರಹ್ಮಶಾಪನಿವಾರಣೆ, ಅದಿತಿ ಕಶ್ಯಪರಿಗೆ ವರದಾನ -- ಇವನ್ನು ಕಾರಣವಾಗಿ ಹೇಳಿದ್ದಾರೆ. ಈ ಯಾವ ಪ್ರಸಂಗಗಳೂ ವಾಲ್ಮೀಕಿ ರಾಮಾಯಣದಲ್ಲಿಲ್ಲ. ರಾಮಚರಿತಮಾನಸದಲ್ಲಿ ಜಯವಿಜಯ ಪ್ರಸಂಗ ಭಾಗವತದಿಂದ ಪ್ರೇರಿತವಾದದ್ದು. ಜಲಂಧರ ಪ್ರಸಂಗ ಋಷಿಪುರಾಣದಿಂದ ಉದ್ಧೃತವಾಗಿದೆ. ನಾರದರ ಪ್ರಸಂಗಕ್ಕೆ ಆಧಾರ ರುದ್ರಸಂಹಿತೆ, ಶಿವಪುರಾಣ, ಭಾಗವತಗಳ ಪ್ರಸಂಗಗಳು. ಮನು ಶತರೂಪಾ ಪ್ರಸಂಗಗಳು ವಿಷ್ಣುಪುರಾಣ ಹಾಗೂ ಭಾಗವತದಿಂದ ಬಂದಿರುವಂಥವು. ಸ್ವಾಯಂಭುವ ಮನು ಮತ್ತು ಶತರೂಪಳ ಉಗಮ ಮತ್ತು ದೇವಹೂತಿ ಮತ್ತು ಕಪಿಲರ ಸಂವಾದ ಇವಕ್ಕೆ ಭಾಗವತವೇ ಮೂಲ. ರಾಜಾಭಾನುಪ್ರತಾಪನ ಕತೆಗೆ ಭಾಗವತದ ರಾಜದಾಸನ ವೃತ್ತಾಂತ ಆಧಾರ. ವಾಲ್ಮೀಕಿ ರಾಮಾಯಣದಲ್ಲಿ ಋಷ್ಯಶೃಂಗನ ವೃತ್ತಾಂತ ವಿವರಣೆಯಿಂದ ಕೂಡಿದೆ. ರಾಮಚರಿತಮಾನಸದಲ್ಲಿ ಸಾಂಕೇತಿಕವಾಗಿದೆ. ವಾಲ್ಮೀಕಿಯಲ್ಲಿ, ರಾಮಜನನ ಮಾನವ ಸಹಜವಾಗಿದೆ. ತುಳಸಿದಾಸರಲ್ಲಿ, ರಾಮನು ಚತುರ್ಭುಜಸಹಿತ ಉದಯಿಸುವನು. ಕೌಸಲ್ಯೆಯು ಅವನನ್ನು ಶಿವನೆಂದು ತಿಳಿದು ಸ್ತೋತ್ರ ಮಾಡುತ್ತಾಳೆ. ಇದರಲ್ಲಿ ಭಾಗವತದ ಛಾಯೆ ಕಾಣುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮನ ಬಾಲಲೀಲೆಯ ವರ್ಣನೆ ಹೆಚ್ಚು ಇಲ್ಲ. ಮಾನಸದಲ್ಲಿ ರಾಮನ ಬಾಲಲೀಲೆಗಳೇ ಅಲ್ಲದೆ ಶಿಶುಸೌಂದರ್ಯದ ವ್ಯಾಪಕ ಉಲ್ಲೇಖವುಂಟು. ತುಳಸೀದಾಸರ ರಾಮನು ಅಲೌಕಿಕ ವ್ಯಕ್ತಿಯಾದ್ದರಿಂದ ಬಾಲ್ಯದ ಅವನ ಅದ್ಭುತ ಲೀಲೆಗಳ ಪ್ರಸಂಗ ದೀರ್ಘವಾಗಿಯೇ ಚಿತ್ರಿತವಾಗಿವೆ.

ವಾಲ್ಮೀಕಿರಾಮಾಯಣದಲ್ಲಿ ಅಹಲ್ಯೆ ಅದೃಶ್ಯಳಾಗಿದ್ದಳೆಂದು ಹೇಳಲಾಗಿದೆ. ಮಾನಸದಲ್ಲಿ ಶಿಲಾರೂಪದಲ್ಲಿದ್ದಳೆಂದು ತಿಳಿದುಬರುತ್ತದೆ. ಅಧ್ಯಾತ್ಮರಾಮಾಯಣಕ್ಕನುಗುಣವಾಗಿ ಅಹಲ್ಯಾ ಶಾಪವಿಮೋಚನಾ ಪ್ರಸಂಗ ಮಾನಸದಲ್ಲಿ ಗಂಗಾನದಿ ದಡದಲ್ಲಿ ನಡೆಯುತ್ತದೆ. ರಾಮಾಯಣದಲ್ಲಿ ರಾಮಪಾದಸ್ಪರ್ಶದಿಂದ ಉದ್ಧಾರಳಾಗುವಳು. ಆದರೆ ಮಾನಸದಲ್ಲಿ ರಾಮನ ಪದರಜದಿಂದ ಅಹಲ್ಯೆ ತೇಜಸ್ವಿ

ನಿಯೂ ಚೈತನ್ಯಮಯಿಯೂ ಆಗಿ ಗೋಚರಳಾಗುತ್ತಾಳೆ.

ಸೀತೆಯ ಸ್ವಯಂವರ ಮಂಟಪದ ದೃಶ್ಯ ಮಂಟಪಕ್ಕೆ ರಾಮನು ಪ್ರವೇಶಿಸಿದ ವೈಖರಿ, ಜನಕರಾಜನ ಭಾವನೆಗಳು, ಸ್ವಯಂವರಕ್ಕೆ ಆಗಮಿಸಿದ್ದ ರಾಜರ ಮನಸ್ಸಿನ ಕಳವಳ, ಸೀತೆಯ ಪ್ರವೇಶ, ಅವಳ ಅದ್ವಿತೀಯ ಸೌಂದರ್ಯ ವರ್ಣನೆ, ದೇವತೆಗಳ ಸಂತೋಷದ ದಿಗ್ದರ್ಶನ, ವಂದಿಮಾಗಧರುಗಳಿಂದ ಬಿರುದಾವಳಿಗಳ ಪಠಣ, ರಾಜರ ಭಗ್ನಮನೋರಥದ ಸಂಗತಿ, ಜನಕನ ನಿರಾಶಾಮನೋಭಾವ, ಸೌಮಿತ್ರಿಯ ಗರ್ವೋಕ್ತಿ -- ಇವೆಲ್ಲ ತುಳಸೀದಾಸರ ಸ್ವಂತ ಕೊಡುಗೆ. ಮಾನಸದಲ್ಲಿ ವಿವಾಹಾನಂತರ ಬೀಳ್ಕೊಡುಗೆಯ ಸಮಾರಂಭ ಹೃದಯಂಗಮವಾಗಿ ಚಿತ್ರಿತವಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮ ಪಟ್ಟಾಭಿಷೇಕ ಪ್ರಸಂಗ ಭರತನು ಅಯೋಧ್ಯೆಯಲ್ಲಿ ಇಲ್ಲದಾಗ ನಡೆಯುತ್ತದೆ. ಆದರೆ ಮಾನಸದಲ್ಲಿ ಭರತನ ಸಮಕ್ಷಮದಲ್ಲಿಯೇ ನಡೆಯುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ದಶರಥನು ಪ್ರಜೆಗಳ ಅಭಿಪ್ರಾಯಕ್ಕೆ ಪ್ರಾಧಾನ್ಯನೀಡುವಂಥವನು. ಮಾನಸದಲ್ಲಿ ಕುಲಗುರುಗಳಾದ ವಸಿಷ್ಠರ ಮಾತಿಗೆ ಗೌರವ ಕೊಡುವ ವ್ಯಕ್ತಿ. ವೈಶಿಷ್ಟ್ಯವೆಂದರೆ ರಾಮಚರಿತಮಾನಸದಲ್ಲಿ ಕೈಕೆ ಮಂಥರೆಯರ ಕೃತ್ಯ ದೈವಪ್ರೇರಿತವೆಂದು ಹೇಳಲಾಗಿದೆ. ಇದಕ್ಕೆ ಅಧ್ಯಾತ್ಮರಾಮಾಯಣವೇ ಪ್ರೇರಕ. ಆದ್ದರಿಂದಲೇ ಮಾನಸದಲ್ಲಿ ಮಂಥರೆಯ ಕುಟಿಲಬುದ್ಧಿಯ ಚಿತ್ರಣ ಇಲ್ಲ. ದೇವಿ ಸರಸ್ವತಿಯು ಮಂಥರೆಯ ಬುದ್ಧಿಯನ್ನು ವಿಕೃತಗೊಳಿಸಿದಳು ಎಂಬ ನುಡಿ ಉಕ್ತವಾಗಿದೆ.

ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮನು ಕೆಲವೊಮ್ಮೆ ಕಟುವಾಗಿ ಮಾತನಾಡುವ ಪ್ರಸಂಗಗಳುಂಟು. ಆದರೆ ಮಾನಸದ ರಾಮ ನಿರ್ವಿಕಾರ ಪರಮಾತ್ಮ ಶಿವನ ಭಕ್ತ, ಪ್ರಕೃತಿ ಪ್ರೇಮಿ. ಪಥಿಕರೂ ಗ್ರಾಮಸ್ಥರೂ ಅನುಕಂಪ ಸೂಚಿಸುತ್ತಾರೆ. ಅವರ ಆರ್ತಾಲಾಪ ಬಹು ಆಕರ್ಷಕವಾಗಿವೆ. ಗ್ರಾಮೀಣ ಮಹಿಳೆಯರು ಸೀತೆಗೆ ಆನಂದದಿಂದ ಆಶೀರ್ವದಿಸುತ್ತಾರೆ. ಈ ಪ್ರಸಂಗಗಳು ಬ್ರಹ್ಮರಾಮಾಯಣ ಮತ್ತು ಮಂಗಲರಾಮಾಯಣದಿಂದ ಸಂಗ್ರಹಿಸಿದ್ದಾಗಿವೆ. ಚಿತ್ರಕೂಟದಲ್ಲಿ ರಾಮಲಕ್ಷ್ಮಣ ಸೀತೆಯರು ವಾಸಿಸುವಾಗ ಯಾವಾಗಲೂ ಆಧ್ಯಾತ್ಮಿಕವಾಗಿಯೇ ಚಿಂತಿಸುತ್ತಿರುತ್ತಾರೆ. ಖರದೂಷಣ ಪ್ರಸಂಗದಲ್ಲಿ, ಮಾನಸದ ಖರದೂಷಣರು ರಾಮನ ಅಪ್ರತಿಮ ಸೌಂದರ್ಯಕ್ಕೆ ಮನಸೋತು ಅವನನ್ನು ಸಂಹರಿಸಲು ಸಂಕೋಚಪಟ್ಟು ದೂತನನ್ನು ಕಳುಹಿಸುತ್ತಾರೆ. ಈ ಪ್ರಸಂಗ ವಾಲ್ಮೀಕಿ ರಾಮಾಯಣದಲ್ಲಾಗಲಿ ಅಧ್ಯಾತ್ಮರಾಮಾಯಣದಲ್ಲಾಗಲಿ ಇಲ್ಲ. ಮಾನಸದಲ್ಲಿ ಸೀತಾಪಹರಣ ಆಗುವುದಕ್ಕೆ ಮುನ್ನವೇ ಸೀತೆ ಅಗ್ನಿಪ್ರವೇಶ ಮಾಡುತ್ತಾಳೆ. ರಾವಣನು ಅಪಹರಿಸಿಕೊಂಡು ಹೋಗುವುದು ಮಾಯಾಸೀತೆಯನ್ನು. ಸೀತೆಯ ಅಗ್ನಿಪ್ರವೇಶದ ಸಂಗತಿ ದೇವಿಭಾಗವತ, ದ್ವೀಪ ರಾಮಾಯಣ ಮತ್ತು ಪೂರ್ವಪುರಾಣಗಳಲ್ಲಿ ದೊರೆಯುತ್ತದೆ. ರಾವಣನು ಮೋಕ್ಷಪ್ರಾಪ್ತಿ ಗಾಗಿಯೇ ರಾಮನೊಡನೆ ವೈರವನ್ನು ಹೊಂದಿದನೆಂದು ಮಾನಸದಲ್ಲಿ ಉಕ್ತವಾಗಿದೆ. ಸೀತಾಪಹರಣ ಪ್ರಸಂಗವು ವಾಲ್ಮೀಕಿ ರಾಮಾಯಣದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಜಗನ್ಮಾತೆ ಸೀತೆಯ ಮರ್ಯಾದಾಭಂಗವಾಗುವುದೆಂಬ ಭಯದಿಂದ, ರಾವಣನು ಸೀತೆಯನ್ನು ಹಿಡಿದು ರಥದಲ್ಲಿ ಕೂರಿಸಿದ. 'ಲೀನ್ಹೀ ರಥ್ ಬೈಠಾಯಿ' ಎಂದು ಮಾನಸದಲ್ಲಿ ಹೇಳಲಾಗಿದೆ. ರಾಮವಿರಹದ ಮನಃಕ್ಷೋಭೆಯ ಸಂಗತಿಗಳು ಮಾನಸದಲ್ಲಿಲ್ಲ. ಅಲ್ಲದೆ ಅಧ್ಯಾತ್ಮರಾಮಾಯಣದಲ್ಲಿರುವಂತೆ ಹನುಮಂತನು ಭಿಕ್ಷುರೂಪಕ್ಕೆ ಬದಲಾಗಿ ವಿಪ್ರರೂಪದಲ್ಲಿ ರಾಮನನ್ನು ನೋಡುವನು. ಸುಗ್ರೀವನು ಭಕ್ತಿ ಭಾವದಿಂದ ಪ್ರೇರಿತನಾಗಿ ಮಹಾವಿರಕ್ತನಾಗುತ್ತಾನೆ. ವಾಲಿವಧೆಯ ವಿಚಾರದಲ್ಲಿ ರಾಮನು ಕರ್ಮದ ಕಡೆಗೆ ಸುಗ್ರೀವನನ್ನು ಪ್ರೇರೇಪಿಸುವ ಪ್ರಸಂಗವಿದೆ ಮಾನಸದಲ್ಲಿ. ತುಳಸಿದಾಸರು ಚಿತ್ರಿಸಿರುವ ವಾಲಿಯ ಪಾತ್ರ ಉಜ್ವಲವಾಗಿದೆ. ರಾಮನು ತನ್ನನ್ನು ಮರೆಯಿಂದ ವಧಿಸಿದುದಕ್ಕಾಗಿ ರಾಮನನ್ನು ನಿಂದಿಸದೆ, ತನ್ನೆದುರಿಗಿರುವ ಜಟಾಮಂಡಲ, ಕಮಲನಯನಗಳ, ಶ್ಯಾಮಲಶರೀರದ ರಾಮನ ಮನಮೋಹರೂಪವನ್ನು ಕಂಡು, ತನ್ನನ್ನು ಭಕ್ತನನ್ನಾಗಿ ಮಾಡಿದ್ದಕ್ಕಾಗಿ ತಾನು ಕೃತಕೃತ್ಯನಾದೆನೆಂದು ಭಾವಿಸಿ ಧನ್ಯಭಾವ ತಾಳುತ್ತಾನೆ. ರಾಮನು ತನ್ನ ವರದಹಸ್ತವನ್ನು ವಾಲಿಯ ತಲೆಯ ಮೇಲಿಟ್ಟು ಮನಃಪೂರ್ವಕ ಆಶೀರ್ವದಿಸುತ್ತಾನೆ. ಈ ಪ್ರಸಂಗದಲ್ಲಿ ಅಧ್ಯಾತ್ಮ ರಾಮಾಯಣದ ಛಾಯೆಯಿದೆ. ರಾಮನ ಮಾತಿನಂತೆ ವಾಲಿಯ ಅಂತ್ಯಕ್ರಿಯೆಯನ್ನು ಅಂಗದನಿಗೆ ಬದಲು ಸುಗ್ರೀವನೇ ನಡೆಸುತ್ತಾನೆ.

ಮಾನಸದಲ್ಲಿ ಹನುಮಂತನ ಸಮುದ್ರಲಂಘನ ಸಂಗ್ರಹವಾಗಿದೆ. ಅಧ್ಯಾತ್ಮರಾಮಾಯಣದ ಲಂಕಿಣಿಯಂತೆ ಇಲ್ಲಿಯವಳೂ ಹನುಮಂತನಿಗೆ ನೀತಿಯ ನಿವಾಸಸ್ಥಾನ ಅರುಹುವಳು. ಲಂಕಾನಗರಿಯ ಮತ್ತು ರಾವಣನ ವೈಭವದ ಚಿತ್ರಣ ಮಾನಸದಲ್ಲಿಲ್ಲ. ಮಾನಸದ ಹನುಮಂತನು ವಿಭೀಷಣನ ಸಲಹೆ ಪಡೆದು ಸೀತೆಯನ್ನು ಅಶೋಕವನದಲ್ಲಿ ನೋಡುತ್ತಾನೆ. ಹನುಮಂತ -- ವಿಭೀಷಣರ ಸಂವಾದ ಭಕ್ತಿಯುತವಾಗಿದೆ. ಈ ಸಂವಾದಕ್ಕೆ ಆನಂದರಾಮಾಯಣ, ಹನುಮದ್ರಾಮಾಯಣ ಮತ್ತು ಪುಲಸ್ತ್ಯರಾಮಾಯಣಗಳು ಆಧಾರವಾಗಿವೆ. ಮಾನಸದಲ್ಲಿ ರಾವಣನಿಗೆ ಒಂದು ಕಪಿಯು ಸೀತೆಯ ಬಳಿ ಮಾತಾಡುತ್ತಿರುವಂತೆ ಕನಸಾಗಿ ತಕ್ಷಣ ಸೀತೆ ಬಳಿಗೆ ಬರುವನು. ವಿಯೋಗಿಣಿ ಸೀತೆ ತನ್ನ ಪ್ರಾಣವನ್ನು ತೊರೆಯಲು ಅಶೋಕದ ಚಿಗುರುಗಳನ್ನು ಅಗ್ನಿಕಣಗಳೆಂದು ಭ್ರಮಿಸಿ ಅದನ್ನು ಯಾಚಿಸುವಳು. ಅದೇ ವೇಳೆಗೆ ವೃಕ್ಷದ ಮೇಲಿದ್ದ ಹನುಮಂತ ಮುದ್ರಿಕೆಯೊಂದಿಗೆ ಕೆಳಗೆ ಬರುವ ದೃಶ್ಯ ಗಮನಾರ್ಹವಾದ್ದು. ಹನುಮಂತನಿಂದ ಲಂಕಾದಹನದ ಬಳಿಕ ಅವನು ಸೀತೆಯಿಂದ ಅಶೋಕವನದಲ್ಲಿ ಅಭಿಜ್ಞಾನ ಪಡೆಯುತ್ತಾನೆ.

ಮಾನಸದಲ್ಲಿ ಶ್ರೀರಾಮನು ವಿಭೀಷಣನನ್ನು ಯಾವುದೇ ವಿಮರ್ಶೆಯಿಲ್ಲದೆ ಆದರದಿಂದ ಸ್ವಾಗತಿಸುತ್ತಾನೆ. ರಾವಣನು ವಿದ್ಯುಜ್ಜಿಹ್ವನ ಮೂಲಕ ರಾಮನ ಶಿರಚ್ಛೇದನ ಮಾಡುವುದು ಮಾನಸದಲ್ಲಿಲ್ಲ. ಇಲ್ಲಿ ರಾವಣನೇ ನೇರವಾಗಿ ಕುಂಭಕರ್ಣನ ಬಳಿಗೆ ಹೋಗುವನು. ರಾವಣನಿಗೆ ಕುಂಭಕರ್ಣನು ರಾಮನ ಆಧ್ಯಾತ್ಮಿಕ ಸ್ವರೂಪವನ್ನು ತಿಳಿಸಿ ಉಪದೇಶಿಸುತ್ತಾನೆ. ರಾಮನ ಮೂಲಕ ಕುಂಭಕರ್ಣನಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆ. ರಾಮನು ಬ್ರಹ್ಮಾಸ್ತ್ರದಿಂದ ಮೂರ್ಛೆ ಹೊಂದಿದಾಗ ಜಾಂಬವಂತನ ಸಲಹೆ ಮೇರೆಗೆ ಸಂಜೀವಿನಿಯನ್ನು ತರುವ ಪ್ರಸಂಗ ಮಾನಸದಲ್ಲಿಲ್ಲ. ಅಗಸ್ತ್ಯರಿಂದ ಆದಿತ್ಯಹೃದಯದ ಉಪದೇಶ ಕೂಡ ಇಲ್ಲ. ಬ್ರಹ್ಮಾಸ್ತ್ರ ಪ್ರಯೋಗಿಸುವಂತೆ ಮಾತಲಿ ಪ್ರೇರೇಪಿಸುವ ಪ್ರಸಂಗವೂ ಮಾನಸದಲ್ಲಿಲ್ಲ. ರಾವಣನ ವಧಾನಂತರ ವಿಭೀಷಣನನ್ನು ಸಂತೈಸುವವನು ಲಕ್ಷ್ಮಣ. ಅಗ್ನಿಪರೀಕ್ಷೆಗೆ ಸೀತೆ ಗುರಿಯಾದ್ದು ಹಿಂದೆ ಅಗ್ನಿಯಲ್ಲಿ ನ್ಯಾಸವಾಗಿಟ್ಟ ಸೀತೆಯನ್ನು ಮತ್ತೆ ಪಡೆಯುವುದಕ್ಕಾಗಿ. ವಾಲ್ಮೀಕಿ ರಾಮಾಯಣದಲ್ಲಿ ರಾಮ ರಾಜ್ಯಾಭಿಷೇಕದ ಉತ್ಸವಕ್ಕಾಗಿ ಅಭಿನಂದಿಸಲು ಬರುವ ಋಷಿಗಳ ಉಲ್ಲೇಖವಿದ್ದರೆ ಮಾನಸದಲ್ಲಿ ಬರುವವರು ದೇವತೆಗಳು. ರಾಮನು ಜನರ ನುಡಿಯಿಂದ ಪ್ರೇರಿತನಾಗಿ ಸೀತಾದೇವಿಯನ್ನು ವನವಾಸಕ್ಕೆ ಕಳುಹಿಸುವ ಪ್ರಸಂಗ ಮಾನಸದಲ್ಲಿ ಉಕ್ತವಾಗಿಲ್ಲ. (ಈ ಪ್ರಸಂಗ ತುಳಸಿದಾಸರಿಗೆ ಔಚಿತ್ಯಪೂರ್ಣವಾಗಿ ತೋರಿಲ್ಲ.)

ಇದಕ್ಕೆ ಪ್ರಮುಖ ಕಾರಣವೆಂದರೆ ತುಳಸೀದಾಸರ ರಾಮ ಸತ್ಯಸಂಧ, ಉದಾರಿ, ತ್ಯಾಗಿ, ಧರ್ಮಾವಲಂಬಿ, ವಿನಯವಂತ, ಮಹಿಮಾನ್ವಿತ, ಇಂಥ ಆದರ್ಶಗುಣಗಳಿರುವ ರಾಮ ಸೀತಾದೇವಿಯನ್ನು ಕಾಡಿಗೆ ಕಳುಹಿಸುವುದು ಸಲ್ಲದು. ಆದ್ದರಿಂದ ತುಳಸೀದಾಸರು ರಾಮನ ಪಾತ್ರದಲ್ಲಿ ಸಾಮಾಜಿಕ ಆದ

(3[illegible] ನೇ ಪುಟನೋಡಿ)

# ಮಕರ ಸಂಕ್ರಮಣ

---ಹೊನ್ನಾವರ, ಆರ್.ಜಿ. ಶ್ಯಾನಭಾಗ.

ಮಾನವನು ಕೈಕೊಳ್ಳುತ್ತಿರುವ ನಿಸರ್ಗ ಆರಾಧನೆ ಮನುಕುಲದಷ್ಟೇ ಪುರಾತನ. ನಿಸರ್ಗ ಪ್ರಕೋಪ ದಿಂದ ಉದ್ಭವಿಸುತ್ತಿರುವ ಆಗು ಹೋಗುಗಳ ರಹಸ್ಯ ವನ್ನು ಭೇದಿಸಲು ಅಸಮರ್ಥವಾದಾಗ ಅವು ದೈವೀ ಶಕ್ತಿ ಎಂದು ಅರ್ಥೈಸಿ ನಿಸರ್ಗ ಆರಾಧನೆಗೆ ಅಣಿ ಯಾದನು, ಕಾಲಕ್ರಮೇಣ ನಿಸರ್ಗ ಆರಾಧನೆ ಹಬ್ಬ ಹರಿದಿನಗಳ ಜಾಯಮಾನವನ್ನು ಪಡೆದುಕೊಂಡು ಆಚರಣೆ ಗೊಳ್ಳಲಾರಂಭಿಸಿದವು. ನಾದಸಂಸ್ಕೃತಿಯ ಕಂಪನ್ನು ಬೀರುತ್ತ ಸಂಸ್ಕೃತಿಯನ್ನು ಪರಿಚಯಿಸುತ್ತಿ ರಲು ಹಬ್ಬ ಹರಿದಿನಗಳು ಆವರ್ತರೂಪದಲ್ಲಿ ಬರು ತ್ತಿವೆ. ಈ ಮಾತಿಗೆ ಸಂಕ್ರಾಂತಿ ಪರ್ವಕಾಲವೂ ಅಪ ವಾದವಾಗಲಾರದು.

ನಿಸರ್ಗದ ದಿವ್ಯಶಕ್ತಿಯ ಆರಾಧನೆಯಲ್ಲಿ ನಭೋ ಮಂಡಲದ ಸ್ವರ್ಣಾಭರಣ ಎಂದು ಮೆರೆಯುತ್ತಿ ರುವ ಸೂರ್ಯದೇವತೆಗೆ ಹಿರಿದಾದ ಪ್ರಾಧಾನ್ಯ ಇದೆ. ತಿಮಿರಾಂಧಕಾರವನ್ನು ಓಡಿಸುವವನೂ, ಸಕಲ ಜೀವಿಗಳ ಚೈತನ್ಯಪೋಷಕ ಹಾಗೂ ಜಗ ಚ್ಚಕ್ಷುವಾಗಿರುವ ಭಾಸ್ಕರನು ಬೆಳಗ್ಗಿನ ವೇಳೆ ಬ್ರಹ್ಮ ನಾಗಿಯೂ ಮಧ್ಯಾಹ್ನದ ವೇಳೆ ವಿಷ್ಣುವಾಗಿಯೂ ಹಾಗೂ ಸಂಜೆಯ ವೇಳೆ ಶಿವನಾಗಿಯೂ ಆರಾಧಿ ಸಲ್ಪಡುತ್ತಾನೆ. ಮಳೆ, ದೆಳೆ, ರೋಗ, ರುಜಿನ, ಕತ್ತಲೆ, ಬೆಳಕು ಮೊದಲಾದ ಪ್ರಕೃತಿಯ ಆಗುಹೋಗುಗ ಳಿಗೆ ಸೂರ್ಯ ದೇವತೆಯೇ ಕಾರಣಭೂತ.

ಪುಷ್ಯಮಾಸ ಶೂನ್ಯಮಾಸ, ಈ ಮಾಸದಲ್ಲಿ ಹಬ್ಬ ಗಳ ಸಂಖ್ಯೆ ಬೆರಳೆಣಿಕೆಯಷ್ಟು. ಇದೊಂದು ಅಶುಭ ಕಾಲವೆಂದು ಯಾವ ಮಂಗಳ ಕಾರ್ಯವನ್ನೂ ಕೈ ಎತ್ತಿಕೊಳ್ಳಲಾರರು.

ಆದರೆ ಬನಶಂಕರಿ ಹುಣ್ಣಿಮೆ ಹಾಗೂ ಮಕರ ಸಂಕ್ರಾಂತಿಗಳು ಈ ಮಾಸದಲ್ಲಿಯೇ ಆಗಮಿಸು ವುವು. ಇಂಗ್ಲೀಷು ಕ್ಯಾಲಂಡರಿನ ಪ್ರಕಾರ ಪ್ರತಿ ವರ್ಷದ ಜನವರಿ ತಿಂಗಳ ೧೪ನೇ ದಿನಾಂಕ ತಪ್ಪದೇ ಬರುವ ಪರ್ವಕಾಲ ಎಂದರೆ ಮಕರ ಸಂಕ್ರಮಣ.

ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಪ್ರವೇಶಿಸುವುದೇ ಸಂಕ್ರಮಣ. ದ್ವಾದಶಿ ರಾಶಿ ಗಳಿಗೆ ತಕ್ಕಂತೆ ದ್ವಾದಶಿ ಸಂಕ್ರಮಣಗಳಿವೆ. ಅವುಗ ಳಲ್ಲಿ ಜನವರಿ ೧೪ಕ್ಕೆ ಬರುವ ಮಕರ ಸಂಕ್ರಮಣ ಹಾಗೂ ಜುಲೈ ೧೬ ರಂದು ಬರುವ ಕರ್ಕಾಟಕ ಸಂಕ್ರಮಣಗಳು ಪ್ರಾಶಸ್ತ್ಯವನ್ನು ಹೊಂದಿವೆ.

ಮಕರ ಸಂಕ್ರಮಣದಂದು ಸೂರ್ಯನು ತನ್ನ ಪಥವನ್ನು ಬದಲಾಯಿಸಿ ಮಕರರಾಶಿಯನ್ನು ಪ್ರವೇ ಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ೬ ಮಾಸ ಗಳವರೆಗೆ ಪಯಣಿಸುತ್ತಾನೆ, ಋತುಮಾನಗಳ ವೈಪರೀತ್ಯ ಅಂದು ನಿಖರವಾಗಿ ಗೋಚರವಾಗು ತ್ತವೆ. ಹಿಂದೂ ಧರ್ಮೀಯರಿಗೆ ಉತ್ತರಾಯಣವು ಪರ್ವಕಾಲ, ಸ್ವರ್ಗದ ಬಾಗಿಲು ಅಂದು ತೆರೆಯುತ್ತದೆ ಎಂದು ವೈಷ್ಣವರಲ್ಲಿ ಆಳವಾದ ನಂಬಿಗೆ ಬೇರೂ ರಿದೆ. ಉತ್ತರಾಯಣದಿಂದ ಮುಂದಿರುವ ದಿನಗಳು ಪ್ರಶಸ್ತವಾಗಿರುವುದರಿಂದಲೇ ಮೃತ್ಯು ಶಯ್ಯೆಯಲ್ಲಿ ರುವ ಇಚ್ಛಾಮರಣಿ ಭೀಷ್ಮನು, ಉತ್ತರಾಯಣ ದಲ್ಲೇ ಕೊನೆಯುಸಿರೆಳೆಯಲು ಇಚ್ಛಿಸಿದನು.

## ಮೂರುದಿನಗಳ ಪರ್ವಕಾಲ :

ಭೋಗಿ, ಸಂಕ್ರಮಣ ಮತ್ತು ಕನು ಎಂಬ ಮೂರು ಹಬ್ಬಗಳ ಆಚರಣೆಯೊಂದಿಗೆ ಮಕರ ಸಂಕ್ರಮಣವು ಪಸರಿಸಿರುವುದು. ಭೋಗಿ ಸಂಕ್ರಮಣ ಉಪವಾಸ ವ್ರತದ ಸಾಮಿಪ್ಯವನ್ನು ಹೊಂದಿದ್ದು ಕೌಟುಂಬಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರುವುದು. ಎರಡ ನೆಯದಿನ ಹಾಲು, ಬೆಲ್ಲ ಅಕ್ಕಿಯಿಂದ ಮಾಡಿದ ಪೊಂಗಲು ಎಂಬ ಪಾಯಸವನ್ನು ಸೂರ್ಯದೇ ವತೆಗೆ ನೈವೇದ್ಯವನ್ನಾಗಿ ಸಲ್ಲಿಸುತ್ತಾರೆ. ತಮಿಳು ನಾಡಿನಲ್ಲಿ ಪೊಂಗಲುಹಬ್ಬದ ಆಚರಣೆಯ ಬೇರು ಬಿಟ್ಟಿದೆ. ಸಂಕ್ರಾಂತಿಯ ಆಚರಣೆಯಲ್ಲಿ ಪ್ರಾದೇ ಶಿಕ ವೈವಿಧ್ಯತೆ ಹಲವಾರು. ತಮಿಳರಿಗೆ ಪೊಂಗಲ್ ಸುಗ್ಗಿಯ ಹಬ್ಬ. ಹೊಸಪೈರಿನಿಂದ ಭತ್ತವನ್ನು ಬಿಡಿಸಿ ಕುಟ್ಟಿ ಅಕ್ಕಿ ಮಾಡಿ ಪೊಂಗಲನ್ನು ತಯಾರಿಸಿ ಸೂರ್ಯದೇವರಿಗೆ ಅದನ್ನು ಅರ್ಪಿಸಿ, ಪೊಂಗಲ್ ಹಬ್ಬವನ್ನು ಆಚರಿಸುತ್ತಾರೆ. ಕನ್ನಡಿಗರಿಗೆ ಅಂದು ಹೊಸ ಅಕ್ಕಿಯ ಹುಗ್ಗಿಯ ಮೇಜವಾನಿ.

ತೃತೀಯ ದಿನ ಗೋಮಾತೆಯ ಆರಾಧನೆ, ಕೃಷಿ ಕರು ಅಂದು ದನಕರುಗಳನ್ನು ಅಡಿಯಿಂದ ಮುಡಿ ಯವರೆಗೆ ಸಿಂಗರಿಸಿ ಸಾರ್ವಜನಿಕ ನೆಲೆಯಲ್ಲಿ ಅವು ಗಳನ್ನು ಮೆರವಣಿಗೆಯಲ್ಲಿ ಒಯ್ಯುವರು; ಅವುಗಳಿಗೆ ತಗಲುವ ದೃಷ್ಟಿ ಹಾಗೂ ನಿವಾರಣೆಗಾಗಿ ಕಿಚ್ಚಿನ ಜಾತ್ರೆಯನ್ನು ವ್ಯವಸ್ಥೆಗೊಳಿಸುವರಲ್ಲದೆ, ನೋಟ, ಕೂಟ, ಕುಣಿತ, ಹಾಗೂ ಪ್ರದಕ್ಷಿಣಾದಿಗಳಿಂದ ಈ ಜಾತ್ರೆಗಳಿಗೆ ನೂತನ ಮೆರಗು. ಹಾಸನ, ಹಾಗೂ ಚುಂಚುನಕಟ್ಟೆಯಲ್ಲಿ ಇಂತಹ ಜಾತ್ರೆಗಳನ್ನು ಅದ್ದೂ ರಿಯಿಂದ ವ್ಯವಸ್ಥೆಗೊಳಿಸಲಾಗುತ್ತಿದೆ. ವರ್ಷ ವಿಡೀ ದುಡಿಮೆಯ ಆಯಾಸವನ್ನು ಈ ಪರ್ವಕಾಲ ದಂದು ರೈತ ಬಾಂಧವರು ಈ ಜಾತ್ರೆಗಳಿಂದ ನೀಗಿ ಸಿಕೊಳ್ಳುವರು.

ಮಧುರೆ, ತಿರುಚಿನಾಪಳ್ಳಿ, ಹಾಗೂ ತಂಜಾ ವೂರುಗಳಲ್ಲಿ ಜಾನಪದ ಶೈಲಿಯಲ್ಲಿ 'ಜೆಲ್ಲಿಕಟ್ಟು' ಎಂಬ ಎತ್ತು ಕೋಣಗಳ ಕಾಳಗವನ್ನು ನಡೆಸುವರು, ಸೊಕ್ಕಿದ ಎತ್ತು ಕೋಣಗಳ ಕೋಡುಗಳಿಗೆ ಹಣದ ಚೀಲ ಇಲ್ಲವೇ ಬೆಳ್ಳಿಯ ಆಭರಣವನ್ನು ಕಟ್ಟಿ ನೆರೆದಿ ರುವ ಜನ ಸಮೂಹದಲ್ಲಿ ನುಗ್ಗಿಸುವರು, ಬಲಾಢ್ಯ ರಾದವರು ಈ ಪ್ರಾಣಿಗಳೊಂದಿಗೆ ಸೆಣಸಾಡಿ ಹಣ, ಆಭರಣವನ್ನು ಬಿಚ್ಚಿಕೊಳ್ಳುವುದೇ ಜೆಲ್ಲಿಕಟ್ಟು.

ಯುಗಾದಿಗೆ ಬೇವು ಬೆಲ್ಲವನ್ನು ನೀಡಿ ಪ್ರಾಶನ ಮಾಡುವಂತೆ ಮಕರ ಸಂಕ್ರಮಣದಂದು ಸಹೋ ದರಿಯರು ಆಪ್ತೇಷ್ಟರು ಎಳ್ಳು ಬೆಲ್ಲವನ್ನು ವಿತರಿಸಿ ಪ್ರಾಶನ ಮಾಡಿ ನಾಲಿಗೆಯನ್ನು ಚಪ್ಪರಿಸಿ ತಮ್ಮ ಬದುಕು ಸೌಜನ್ಯಪೂರ್ವಕ ನುಡಿಗೆ ಮುಡುಪಾ ಗಿರಲಿ ಎಂದ ಪರಸ್ಪರರು ಶುಭ ಕೋರಿ ಹಾರೈಸು ವರು. ಎಳ್ಳು ಬೆಲ್ಲದ ಹಂಚಿಕೆ ಪರಸ್ಪರರ ಸೌಜನ್ಯದ ದ್ಯೋತಕವೇ ಆಗಿದೆ.

ಪುಟಾಣಿಯರ ಪೀಡಾ ಪರಿಹಾರಕ್ಕೆ ಅವರಿಗೆ ಅಭ್ಯಂಜನ ಮಾಡಿಸಿ ಅವರ ತಲೆಯ ಮೇಲೆ ಬೋರೆಹಣ್ಣು, ಹಾಗೂ ಕಬ್ಬನ್ನು ಎರೆದು ಆರತಿ ಯನ್ನು ಎತ್ತುವರು. ಜಲಸ್ನಾನವನ್ನು ಮಾಡಿ ಮಕರ ಸಂಕ್ರಮಣದಂದು ಕೆಲವು ದೇವಾಲಯಗಳ ಉತ್ತರ ಬಾಗಿಲನ್ನು ಪ್ರವೇಶಿಸಿದರೆ, ಸ್ವರ್ಗದ ತೆರೆದ ಬಾಗಿಲು ನೋಡಿ ಬಂದಷ್ಟೇ ಪುಣ್ಯ ಎಂಬ ನಂಬಿಗೆ.

ಆಂಧ್ರಪ್ರದೇಶದಲ್ಲಿ ಈ ಹಬ್ಬದ ಆಚರಣೆ ವೈಶಿಷ್ಟ್ಯಪೂರ್ಣ. ಶ್ರೀರಾಮನು ರಾವಣನನ್ನು ವಧಿಸಿ ಜಾನಕಿಯನ್ನು ತಂದ ದಿನವೆಂದು ಅಂದು ರಾವಣನ ಪ್ರತಿಕೃತಿಯನ್ನು ಮಾಡಿ -- ಸಾರ್ವಜನಿಕ ನೆಲೆಯಲ್ಲಿ ದಹನಮಾಡುವರು, ಇದಕ್ಕೆ ಭೋಗಿಮಂಟಲು

## ಸಪ್ತಗಿರಿ

ಬರಹಗಾರರಿಗೆ ·ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.**

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

ಸಂಪಾದಕರು
**ಸಪ್ತಗಿರಿ**
ತಿ. ತಿ. ದೇವಸ್ಥಾನ, ತಿರುಪತಿ-೫೧೭೫೦೭
ಚಿತ್ತೂರು ಜಿಲ್ಲೆ, ಆಂ. ಪ್ರ.

ಎನ್ನುವರು. ಪಿತೃಗಳ ಆತ್ಮಗಳು ಅಂದು ಸ್ವರ್ಗದಿಂದ ಧರೆಯ ಮೇಲೆ ಬಂದು ತಮ್ಮ ಮನೆಯಂಗಳ ಬರುವುವು ಎಂದು ಆಂಧ್ರದ ಜನತೆಯ ನಂಬಿಗೆ. ಅಲಹಾಬಾದಿನ ಸುಪ್ರಸಿದ್ಧ ಕುಂಭಮೇಳ ಜಾತ್ರೆಯು ಮಕರ ಸಂಕ್ರಮಣವಂದೇ ನಡೆಯುವುದು.

ಇದು ಸುಗ್ಗಿಯ ಕಾಲವಾಗಿರುವುದರಿಂದ ಅನುಕೂಲಸ್ಥ ರೈತರು ತಾವು ಬಿತ್ತಿಬೆಳೆದದ್ದನ್ನು ಬಡಬಗ್ಗರಿಗೆ ದಾನಗೈದು ಕೊಡುಗೈದೊರೆಯಾಗಿ ಮೆರೆಯುವರು.

ಮಕರ ಸಂಕ್ರಮಣದಂದು ಎಳ್ಳು ಬೆಲ್ಲವನ್ನು ವಿತರಿಸುವ ಪರಿಪಾಠ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವದಿಲ್ಲ, ಆಧುನಿಕ ನಾಗರಿಕತೆ ಈ ಪರ್ವ ಕಾಲದಂದು ಎಳ್ಳು ಬೆಲ್ಲವನ್ನು ವಿತರಿಸಿ ಶುಭಾಶಯವನ್ನು ಕೋರುವ ಸಾವಿನ್ಯ ಹಾಗೂ ವೈವಿಧ್ಯಮಯ ರೂಪವನ್ನು ತಾಳಿವೆ.

### *ಕೊಡಗಿನಲ್ಲಿ ಸಂಕ್ರಾಂತಿ*

ವೀರೋಚಿತ ಪರಂಪರೆಗೆ ಹೆಸರುವಾಸಿಯಾದ ಕೊಡಗಿನವರು ಈ ಹಬ್ಬವನ್ನು ಹುತ್ತರಿ ಹಬ್ಬವನ್ನಾಗಿ ಆಚರಿಸುವರು. ಅವರ ಪಾಲಿಗೆ ಇದೊಂದು ಸುಗ್ಗಿಯ ಹಬ್ಬ, ಸಾಂಪ್ರದಾಯಕ ಪೋಷಾಕನ್ನು ಧರಿಸಿ ಗೆಜ್ಜೆಕಟ್ಟಿ ಕೋಲಾಟ ಹಾಗೂ ಪಡೆತಳಿ ಎಂಬ ಯುದ್ಧನೃತ್ಯದ ವರ್ಣಮಯ ಪರಿಸರದಲ್ಲಿ ಪ್ರದರ್ಶನ ಈ ಹಬ್ಬದ ಆಚರಣೆಗೆ ಮೆರುಗನ್ನು ನೀಡುವುದು. ಯುದ್ಧನೃತ್ಯ ಪಡೆಕಳಿ ಇವರ ವೀರ ಪರಂಪರೆಯನ್ನು ನೆನಪಿಸಿ ಕೊಡುವುದರ ಜೊತೆಗೆ ಅದನ್ನು ಪೋಷಿಸಿಕೊಂಡು ಬರುತ್ತಿದೆ ಹಬ್ಬದೊಂದಿಗೆ. ಹುತ್ತರಿ ಎಂದರೆ ಹೊಸಅಕ್ಕಿ ಎಂದರ್ಥ. ಗದ್ದೆಯಲ್ಲಿ ಬೆಳೆದಿರುವ ಹೊಸ ಭತ್ತವನ್ನು ಮನೆಗೆ ತರುವ ಸಂಭ್ರಮವೇ ಹುತ್ತರಿ ಹಬ್ಬ, ಕೊಡಗಿನಲ್ಲಿ ಹುತ್ತರಿ ಹಬ್ಬ ನಡೆದು ಬಂದುದರ ಸುತ್ತಣ ಪೌರಾಣಿಕ ಪ್ರತೀತಿಯೊಂದು ಹೆಣೆದಿದೆ.

ಹುಲುಸಾಗಿ ಬೆಳೆದ ಪೈರನ್ನು ತಮ್ಮ ಮನೆಗೆ ಕಟಾವು ಮಾಡಿ ತರಲು ಶುಭಮೂಹರ್ತವನ್ನು ನಿಶ್ಚಯಿಸಲು ಕೊಡಗಿನವರು ತಮ್ಮ ಇಗ್ಗುತಪ್ಪದೇವರನ್ನು ಮಲಬಾರಿನಲ್ಲಿ ನೆಲೆಸಿರುವ ಅವನ ಅಣ್ಣನಾದ ದೇಂದ್ರು ಕೋಲಪ್ಪನೆಡೆಗೆ ಕರೆತರುವರು. ಕೇರಳದಲ್ಲಿ ಪ್ರಚಲಿತ ಇರುವ ಓಣಂದ ಮಾದರಿಯಲ್ಲಿ ಉತ್ಸವವನ್ನಾಚರಿಸಿ ಎಂದು ಆಶೀರ್ವದಿಸಿ ಬೆಳೆಯನ್ನು ಕೊಯ್ಯಲು ದೇಂದ್ರು ಕೋಲಪ್ಪನು ಇಗ್ಗು ತಪ್ಪದೇವರಿಗೆ ಕುಡುಗೋಲನ್ನು ಕೊಡುವನು.

ಓಣಂ ತಾಯಿಯ ಕೃಪೆಯಿಂದ ಹುತ್ತರಿ ಹಬ್ಬ ತಮ್ಮ ನಾಡಿನಲ್ಲಿ ನಡೆದು ಬಂದಿತೆಂದು ಕೊಡಗಿನವರು ನೆನೆಯುತ್ತಾರೆ, ಮಾರ್ಗಶಿರ ಮಾಸದ ಹುಣ್ಣಿಮೆಯ ದಿನದಿಂದ ಒಂದು ಸಪ್ತಾಹದ ವರೆಗೆ ಈ ಹಬ್ಬವನ್ನು ಕೊಡಗಿನವರು ಸಂಭ್ರಮೋಲ್ಲಾಸದಿಂದ ಆಚರಿಸುವರು, ಈ ಹಬ್ಬಕ್ಕೆ ಇಂದಿಗೂ ಇಗ್ಗುತಪ್ಪದೇವರು ಅಧಿದೇವತೆ, ಇಗ್ಗುತಪ್ಪದೇವರೆಂದರೆ ಸುಬ್ರಹ್ಮಣ್ಯಸ್ವಾಮಿ, ಭಕ್ತವೃಂದಾದಿಗಳ ಇಷ್ಟಾರ್ಥವನ್ನು ಕರುಣಿಸುವ ಸ್ವಾಮಿ ಈತ. ಈತನ ಪ್ರೀತಿಗಾಗಿಯೇ ಹಿಗ್ಗಿ ಆನಂದದ ದ್ಯೋತಕವಾಗಿ ಹುತ್ತರಿ ಹಬ್ಬವನ್ನು ಆಚರಿಸುವರು

ಎಳ್ಳು ಬೆಲ್ಲವನ್ನು ವಿತರಿಸಿ ಪ್ರಾಶನಮಾಡಿ ನಡೆನುಡಿಯ ಬದುಕಿನ ಪರಂಪರೆಯನ್ನು ಸವಿಯಾಗಿ ನೆನಪಿಸಿಕೊಡಲು ಮರಳಿ, ಮರಳಿ ಬರುತಿರುವ ಈ ಮಕರ ಸಂಕ್ರಮಣ ನಮ್ಮ ಬದುಕಿಗೆ ಭರವಸೆಯ ಆಶಾಕಿರಣವನ್ನು ಮೂಡಿಸುತ್ತಿರಲೆಂದು ಹಾರೈಸೋಣ.



(34 ನೇ ಪುಟದಿಂದ)

ಶಗಳ ಸಮಾವೇಶನ ಮಾಡಿದ್ದಾರೆ. ರಾಮನ ಪಾತ್ರವನ್ನು ಉಜ್ವಲಗೊಳಿಸಿದ್ದಾರೆ. ಸೀತಾವನವಾಸ ಪ್ರಸಂಗ ಮಾನಸದಲ್ಲಿ ಇಲ್ಲದ್ದರಿಂದ ಯಜ್ಞಶಾಲೆ, ಲವಕುಶರೊಂದಿಗೆ ವಾಲ್ಮೀಕಿಗಳ ಆಗಮನ, ಸೀತೆಯ ಪಾತಾಳ ಪ್ರವೇಶ ಮುಂತಾದವುಗಳ ಉಲ್ಲೇಖಗಳಿಲ್ಲ. ಉತ್ತರಕಾಂಡದ ಅಂತ್ಯದಲ್ಲಿ ರಾಮಕಥಾ ಮಹಾತ್ಮೆಯನ್ನು ಸೊಗಸಾಗಿ ವರ್ಣಿಸಲಾಗಿದೆ. ರಾಮಕಥೆಯ ಮೂಲಕ ಮನುಷ್ಯತ್ವವನ್ನು ಅಶಕ್ತಿಯಿಂದ ಶಕ್ತಿಯ ಕಡೆಗೆ, ಅಶಾಂತಿಯಿಂದ ಶಾಂತಿಯ ಕಡೆಗೆ, ರಸಾತಲದಿಂದ ಸ್ವರ್ಗದೆಡೆಗೆ ಸೆಳೆದೊಯ್ಯುವುದೇ ಮಾನಸದ ಪ್ರಮುಖ ಗುರಿ ಹಾಗೂ ಉದ್ದೇಶ. ಪಂಡಿತ -- ಪಾಮರ, ಬಡವ -- ಬಲ್ಲಿದ, ಗೃಹಸ್ಥ -- ವೈರಾಗಿ ಎಲ್ಲರಿಗೂ ಬದುಕಿನ ಮರ್ಮವನ್ನು ಬೋಧಿಸುವ ಮಹಾನ್ ಕಲಾಕೃತಿ ರಾಮಚರಿತಮಾನಸ. 'ವ್ಯಷ್ಟಿಯ ಉದ್ಧಾರಕ್ಕೆ ಸಮಷ್ಟಿಯ ಉದ್ಧಾರವೇ ಆಧಾರ'ವೆಂಬ ಮೂಲಭೂತ ತತ್ವವನ್ನು ಮನಗಾಣಿಸುತ್ತದೆ ಮಾನಸ.



# ವಾರ್ತಾಲಹರಿ

## ನೂತನ ಕಾರ್ಯನಿರ್ವಹಣಾಧಿಕಾರಿ



ಶ್ರೀ ಡಿ. ವಿ. ಎಲ್. ಎನ್. ಮೂರ್ತಿ



ಶ್ರೀ ಎಂ. ವಿ. ಎಸ್. ಪ್ರಸಾದ್

ತಿರುಮಲೆ ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಪದವಿಗೆ ಶ್ರೀ ಎಂ. ವಿ. ಎಸ್. ಪ್ರಸಾದ್ ಐ.ಎ.ಎಸ್. ಅವರ ಸ್ಥಾನದಲ್ಲಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಐ.ಎ.ಎಸ್. ಅವರನ್ನು ಆಂಧ್ರಪ್ರದೇಶ ಸರ್ಕಾರ ನೇಮಿಸಿದೆ. ಶ್ರೀ ಎಂ. ವಿ. ಎಸ್. ಪ್ರಸಾದರನ್ನು ಆಂಧ್ರಪ್ರದೇಶದ ಸಮಾಚಾರ ಹಾಗೂ ಪ್ರಸಾರ ಖಾತೆಯ ಕಮಿಷನರ್ ಆಗಿ ವರ್ಗಮಾಡಲಾಗಿದೆ. ಸಮಾಚಾರ ಹಾಗೂ ಪ್ರಸಾರ ಖಾತೆಯ ಕಮಿಷನರ್ ಆಗಿದ್ದ ಶ್ರೀ ಡಿ. ವರಾಹ ಲಕ್ಷ್ಮೀನರಸಿಂಹ ಮೂರ್ತಿ ಅವರು ತಿರುಮಲೆಗೆ ಆಗಮಿಸಿ ಡಿಸೆಂಬರ್ 4 ರಂದು ಶುಕ್ರವಾರ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಪದವಿಯ ಪ್ರಮಾಣ ವಚನವನ್ನು ಸ್ವೀಕರಿಸಿದರು.

1938 ರಲ್ಲಿ ವಿಶಾಖ ಪಟ್ಟಣದಲ್ಲಿ ಜನಿಸಿದ ಶ್ರೀ ಡಿ. ವಿ. ಎಲ್. ಎನ್. ಮೂರ್ತಿಯವರು ಸಾರಿಗೆ ಇಲಾಖೆಯಲ್ಲಿ ಉದ್ಯೋಗಕ್ಕೆ ಸೇರಿ ಅದೇ ಇಲಾಖೆಯ ಮುಖ್ಯಸ್ಥರಾಗಿ 1977 ರಲ್ಲಿ ಐ.ಎ.ಸ್. ಪದವಿ ಪಡೆದರು. ದೇವರ ಸನ್ನಿಧಿಯಲ್ಲಿ ಸೇವೆ ಸಲ್ಲಿಸುವ ಭಾಗ್ಯ ದೊರೆತಿದೆ. ಅದನ್ನು ಸದ್ವಿನಿಯೋಗ ಮಾಡಿಕೊಂಡು ತಿ.ತಿ.ದೇ. ಗೌರವಕ್ಕೆ ತಕ್ಕಂತೆ ನಡೆಯುವುದಾಗಿಯೂ, ಯಾತ್ರಿಕ ಭಕ್ತರ ಸೇವೆಯಲ್ಲಿ ಆಡಳಿತವನ್ನು ಹೆಚ್ಚಿನ ಆಸಕ್ತಿ ವಹಿಸುವಂತೆ ಮಾಡುವುದೇ ತಮ್ಮ ಧ್ಯೇಯವೆಂದೂ, ಮಾನವ ಸೇವೆಯ ಮೂಲಕವೇ ಮಾಧವ ಸೇವೆ ಮಾಡುವುದಾಗಿಯೂ ಅವರು ಕಾರ್ಯನಿರ್ವಹಣಾಧಿಕಾರಿಯಾಗಿ ಪ್ರಥಮ ಬಾರಿಗೆ ಪತ್ರಿಕಾ ಸಮಾವೇಶದಲ್ಲಿ ತಿಳಿಸಿದರು.

ತಿ.ತಿ.ದೇ. ಉದ್ಯೋಗಿಗಳ ಸಂಘಟನೆ ತಿ.ತಿ.ದೇ.ಗಳಲ್ಲಿ ಯಶಸ್ವಿ ಸೇವೆಸಲ್ಲಿಸಿ ಸಮಾಚಾರ ಇಲಾಖೆಗೆ ತೆರಳುತ್ತಿರುವ ಶ್ರೀ ಎಂ. ವಿ. ಎಸ್. ಪ್ರಸಾದರಿಗೆ ಬೀಳ್ಕೊಡುಗೆಯನ್ನೂ ಸಮಾಚಾರ ಶಾಖೆಯಿಂದ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯಾಗಿ ಆಗಮಿಸುತ್ತಿರುವ ಶ್ರೀ ಡಿ. ವಿ. ಎಲ್. ಎನ್. ಮೂರ್ತಿಯವರಿಗೆ ಸ್ವಾಗತವನ್ನೂ ಕೋರಿ ಸಂಘಟನೆಯ ಗೌರವಾಧ್ಯಕ್ಷ ಶ್ರೀ ಮೋಹನರಾವು ಅವರ ಅಧ್ಯಕ್ಷತೆಯಲ್ಲಿ ಸಮಾರಂಭವನ್ನು ಏರ್ಪಡಿಸಿತ್ತು. ಶ್ರೀ ಮೋಹನರಾವ್ ಅವರು ಶ್ರೀ ಎಂ. ವಿ. ಎಸ್. ಪ್ರಸಾದರನ್ನೂ, ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರನ್ನೂ ಜೋಡಿ ಶಾಲುವಿನಿಂದ ಸತ್ಕರಿಸಿ ಶ್ರೀ ಎಂ.ವಿ.ಎಸ್. ಪ್ರಸಾದರಿಗೆ ನಟರಾಜ ವಿಗ್ರಹವನ್ನು ಬಹೂಕರಿಸಿದರು. ವಿವಿಧ ಉದ್ಯೋಗಿ ಸಂಘಗಳ ಮುಖ್ಯಸ್ಥರು ವರ್ಗವಾದ ಕಾರ್ಯನಿರ್ವಹಣಾಧಿಕಾರಿಯವರನ್ನು ಶ್ಲಾಘಿಸಿ ಮಾತನಾಡಿದರು.

### ತಿ. ತಿ. ದೇ. ಗಳಿಗೆ ಹಾಸುಕಂಬಳಿಯ ಕಾಣಿಕೆ

ಭವಾನಿಯ ಕಂದನ್ ಇಂಡಸ್ಟ್ರೀಸ್‌ನ ಮ್ಯಾನೇಜಿಂಗ್ ಪಾಲುದಾರರಾದ ಶ್ರೀ ಎ. ಗೋವಾರಸ್ವಾಮಿ ಅವರು ತಿ.ತಿ.ದೇ.ಗಳಿಗೆ ಬಳಕೆಗಾಗಿ ಅರವತ್ನಾಲ್ಕು ಹಾಸು ಕಂಬಳಿ (ಜಮಖಾನೆ)ಗಳನ್ನು ನೀಡಿದ್ದಾರೆ. ಇವುಗಳಲ್ಲಿ ಆನೆಯ ಹೊದಿಕೆಗಳು ಹತ್ತು, ಕುದುರೆಯ ಹೊದಿಕೆಗಳು ಹನ್ನೆರಡು ಮತ್ತು ಹಸುವಿನ ಹೊದಿಕೆಗಳು ಆರು ಆಗಿದ್ದು ಮಿಕ್ಕವು 13 ಅಡಿ x 7 ಅಡಿ ವಿಸ್ತಾರದಿಂದ 4.5 ಅಡಿ x 6.5 ಅಡಿ ವಿಸ್ತಾರದವುಗಳಾಗಿವೆ.

### ತಿರುಮಲೆಯಲ್ಲಿ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ. ಶಂಕರದಯಾಳ ಶರ್ಮ ಅವರು ಕುಟುಂಬ ಸಮೇತರಾಗಿ ತಿರುಮಲೆಯ ಸ್ವಾಮಿ ಸನ್ನಿಧಿಗೆ ಬಂದು ಆರಾಧಿಸಿ ಆಶೀರ್ವಾದ ಪಡೆದರು.

ರಾಷ್ಟ್ರಪತಿಯವರು ನವಂಬರ್ 19 ರಂದು ಗುರುವಾರ ಸಂಜೆ ವಿಮಾನಾಶ್ರಯದಿಂದ ಕಾರಿನಲ್ಲಿ ತಿರುಮಲೆಯ ಶ್ರೀ ಪದ್ಮಾವತೀ ಅತಿಥಿ ಗೃಹವನ್ನು ಸೇರಿ ನಂತರ ಕುಟುಂಬ ಸಭ್ಯರೊಡನೆ ಸಂಪ್ರದಾಯಬದ್ಧವಾಗಿ ಶ್ರೀ ವರಾಹಸ್ವಾಮಿ ಆಲಯವನ್ನು ಸಂದರ್ಶಿಸಿ ನಂತರ ಶ್ರೀ ವೆಂಕಟೇಶ್ವರಸ್ವಾಮಿ ಆಲಯವನ್ನು ಸೇರಿದರು. ಸಂಪ್ರದಾಯದಂತೆ ಆಲಯ ಮರ್ಯಾದೆಗಳೊಡನೆ ಅವರನ್ನು ಸ್ವಾಗತಿಸಲಾಯಿತು. ಹದಿನೈದು ನಿಮಿಷ ಸ್ವಾಮಿಯ ಸೇವೆಯಲ್ಲಿದ್ದ ರಾಷ್ಟ್ರಪತಿಯವರು ಆನಂದನಿಲಯ ಪ್ರದ

### ಪ್ರಾಮಾಣಿಕತೆಪುರಸ್ಕಾರ



ತಿರುಮಲೆಯ ಯಾತ್ರಿಕರ ನಿವಾಸಸ್ಥಳದಲ್ಲಿ ಮರೆತುಹೋಗಿದ್ದ ಬೆಂಗಳೂರಿನವರ ಆಭರಣಗಳನ್ನು (34000 ರೂಗಳ ಮೊತ್ತದ ವಜ್ರದ ಉಂಗುರಗಳು) ಹಿಂದಿರುಗಿಸಿದ ಶ್ರೀ ಎಸ್. ಸುಬ್ರಹ್ಮಣ್ಯಂ-- ಅಟೆಂಡರ್ -- ಅವರಿಗೆ ತಿ.ತಿ.ದೇ. ಯಾಜಮಾನ್ಯ 100 ರೂಗಳ ಬಹುಮಾನವನ್ನು ನೀಡಿ ಅವರ ಪ್ರಾಮಾಣಿಕತೆಯನ್ನು ಪುರಸ್ಕರಿಸಿದೆ. ಬೆಂಗಳೂರಿನ ಶ್ರೀ ಪಿ. ಕೃಷ್ಣಸ್ವಾಮಿಯವರು 25--10--1992 ರಂದು ತಿರುಪತಿಯ ನಾರಾಯಣಾದ್ರಿ ಅತಿಥಿಗೃಹದಲ್ಲಿ ತಮ್ಮ ಕೋಣೆಯನ್ನು ತೆರವು ಮಾಡಿದಾಗ ಆಭರಣಗಳನ್ನು ಮರೆತು ಹೋಗಿದ್ದರು. ಅದನ್ನು ಗಮನಿಸಿದ ಅಲ್ಲಿನ ಗೋವಿಂದ ಮಾಲಾ ವ್ರತಧಾರಿ, ಅಟೆಂಡರ್ ಶ್ರೀ ಸುಬ್ರಹ್ಮಣ್ಯಂ ಅವರು ಕೃಷ್ಣಸ್ವಾಮಿಯವರ ಬಂಧುಗಳಾದ ತಿರುಮಲೆಯ ಅಂಚೆ ಅಧಿಕಾರಿಗಳಿಗೆ ಆಭರಣಗಳನ್ನು ಒಪ್ಪಿಸಿ ತಮ್ಮ ಪ್ರಾಮಾಣಿಕತೆಯನ್ನು ತೋರಿಸಿದರು.



## ಡಾ|| ವ್ಯಾಘ್ರೇಶ್ವರುಡು ನಿಧನ

ಖ್ಯಾತ ಆರ್ಥೋಪಿಡಿಕ್ ತಜ್ಞ ಡಾ. ವ್ಯಾಘ್ರೇಶ್ವರುಡು ಅವರು ನವಂಬರ್ 20 ರಂದು ರಾತ್ರಿ ವಿಶಾಖಪಟ್ಟಣದಲ್ಲಿ ಮೃತರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ಪೂರ್ವಗೋದಾವರೀ ಜಿಲ್ಲೆಯ ರಾಜಮಹೇಂದ್ರಿಯಲ್ಲಿ 1917 ರಲ್ಲಿ ಜನಿಸಿದ ವ್ಯಾಘ್ರೇಶ್ವರುಡು ಅವರು 1914 ರಲ್ಲಿ ಆಂಧ್ರ ಮೆಡಿಕಲ್ ಕಾಲೇಜಿನಿಂದ ಪದವಿ ಪಡೆದರು. ಆರ್ಥೋಪಿಡಿಕ್ಸ್ ವಿಭಾಗದಲ್ಲಿ ಎಂ. ಎಸ್. ಪದವಿಯನ್ನು ಪಡೆದ ಕೆಲವೇ ಮಂದಿಯಲ್ಲಿ ಆತ ಒಬ್ಬರು. ಮೊಣಕಾಲ ಮೇಲೆ ಕೈಯನ್ನೂರಿ ನಡೆಯುವವರನ್ನು ಕೈಬಿಟ್ಟು ನಡೆಯುವಂತೆ ಶಸ್ತ್ರಚಿಕಿತ್ಸೆ ನಡೆಸಿದ ಪ್ರಥಮ ಭಾರತೀಯ ಡಾ. ವ್ಯಾಘ್ರೇಶ್ವರುಡು. ಬಹು ಸ್ಥಳಗಳಲ್ಲಿ ಪೋಲಿಯೋ ಚಿಕಿತ್ಸಾ ಶಿಬಿರಗಳನ್ನು ಉಚಿತವಾಗಿ ನಡೆಸಿದ ಕೀರ್ತಿ ಅವರದು. 30 ಸಾವಿರ ಮಂದಿಗೆ ಉಚಿತವಾಗಿ ಶಸ್ತ್ರಚಿಕಿತ್ಸೆ ನಡೆಸಿದ ಅವರಿಗೆ ಇಂಡಿಯನ್ ಆರ್ಥೋಪಿಡಿಕ್ ಅಸೋಷಿಯೇಷನ್ ಫೆಲೋಷಿಪ್ ನೀಡಿದ್ದಿತು. ಆಂಧ್ರ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪಶಸ್ತಿಯೂ ದೊರೆತಿದ್ದಿತು.

ತಿರುಮಲೆ ತಿರುಪತಿ ದೇವಸ್ಥಾನಗಳ ಬಾಲಾಜಿ ವಿಕಲಾಂಗರ ಚಿಕಿತ್ಸಾ ಕೇಂದ್ರ ಬರ್ಡ್‌ನ ನಿರ್ದೇಶಕರಾಗಿ ಅತ್ಯಮೂಲ್ಯಸೇವೆ ಸಲ್ಲಿಸಿದ್ದ ಶ್ರೀಯುತರು ಅದರ ಸಲಹಾದಾರರಾಗಿ ಭಾರತದ ಚಿಕಿತ್ಸಾಕೇಂದ್ರಗಳ ಭೂಪಟದಲ್ಲಿ ಬರ್ಡ್ ಅನ್ನು ನೆಲೆಗೊಳಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಅವರ ಆತ್ಮಕ್ಕೆ ಶಾಂತಿಯನ್ನು ಶ್ರೀ ವೆಂಕಟೇಶ್ವರಸ್ವಾಮಿ ನೀಡಲೆಂದು ಸಪ್ತಗಿರಿ ಪ್ರಾರ್ಥಿಸುತ್ತದೆ. --ಸಂ||

## ಸಂತಾಪ

ವಿಕಲಾಂಗರನ್ನು ರಾಷ್ಟ್ರೀಯ ಜೀವನ ಸ್ರವಂತಿಯಲ್ಲಿ ತರಲು ತಮ್ಮ ಇಡೀ ಜೀವನವನ್ನು ಅಂಕಿತಗೊಳಿಸಿದ ನಿಸ್ವಾರ್ಥ ವೈದ್ಯ ಡಾ|| ವ್ಯಾಘ್ರೇಶ್ವರುಡು ಎಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ವಿ.ಎಸ್. ಪ್ರಸಾದರು ಡಾ|| ವ್ಯಾಘ್ರೇಶ್ವರುಡು ಅವರ ನಿಧನದ ಸಂತಾಪ ಸಭೆಯಲ್ಲಿ ಮಾತನಾಡುತ್ತ ಭಾವಪೂರ್ಣವಾಗಿ ನುಡಿದರು. ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಿ. ವೆಂಕಟರಾಮಯ್ಯನವರು ಮಾತನಾಡುತ್ತ ತಿ.ತಿ.ದೇ. ಗಳ ನಿರ್ವಹಣೆಯಲ್ಲಿ ಒಳ್ಳೆಯ ಹೆಸರು ಪಡೆದು, ದೇಶ ವ್ಯಾಪ್ತ ಕೀರ್ತಿ ಪಡೆದ ಬಾಲಾಜಿ ಅಂಗವಿಕಲ ಸಂಶೋಧನ ಪುನರಾವಾಸ ಸಂಸ್ಥೆ 'ಬರ್ಡ್' ರೂಪುಶಿಲ್ಪಿ ಡಾ|| ವ್ಯಾಘ್ರೇಶ್ವರುಡು ಎಂದೂ ಎಲ್ಲ ಕೀರ್ತಿಗೂ ಅವರ ನಿರಂತರ ಸಹಾನುಭೂತಿಯ ವೈದ್ಯ ಹೃದಯವೇ ಮೂಲವೆಂದೂ ತಿಳಿಸಿದರು.

ಸೀನಿಯರ್ ಸ್ಟಾಫ್ ನರ್ಸ್ ಶ್ರೀಮತಿ ಮೀರಾ, ಡಾ|| ಜಗದೀಶ್, ಎಂಪ್ಲಾಯಿಸ್ ಅಸೋಷಿಯೇಷನ ಶ್ರೀ ರಮಣ ಅವರುಗಳೂ ಶ್ರೀಯುತರ ಗುಣಗಾನ ಮಾಡಿ ಅವರ ಆದರ್ಶಗಳನ್ನು ತಮ್ಮದಾಗಿ ಮಾಡಿಕೊಳ್ಳುವ ಆತ್ಮೀಯತೆಯನ್ನು ಸೂಚಿಸಿದರು. ರೂಯಾ ಆಸ್ಪತ್ರೆಯ ಆರ್ಥೋಪಿಡಿಕ್ ಪ್ರಾಚಾರ್ಯರುಗಳಾದ (ಡಾ|| ವ್ಯಾಘ್ರೇಶ್ವರುಡು ಶಿಷ್ಯರೂ ಹೌದು) ಡಾ|| ಕೃಷ್ಣ, ಡಾ|| ಕಿಶೋರ್‌ರಾಯ್ ಅವರುಗಳೂ ಸಂತಾಪ ಸಭೆಯಲ್ಲಿ ಭಾಗವಹಿಸಿದ್ದರು.

ಕ್ಷಿಣೆ ಮಾಡಿ ಧ್ವಜಸ್ಥಂಬದ ಬಳಿ ಮೂರುಬಾರಿ ಸಾಷ್ಟಾಂಗ ನಮಸ್ಕಾರ ಮಾಡಿದರು. ರಾಷ್ಟ್ರಪತಿಯರಿಗೆ ಶ್ರೀ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದ ನೀಡಲಾಯಿತು. ತಿ.ತಿ.ದೇ. ಅಧ್ಯಕ್ಷರು ಶ್ರೀ ಟಿ. ಸುಬ್ಬರಾಮಿರೆಡ್ಡಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ವಿ. ಎಸ್. ಪ್ರಸಾದ್ ಅವರುಗಳು ರಾಷ್ಟ್ರಪತಿಯವರಿಗೆ ಸ್ವಾಮಿಪ್ರಸಾದಗಳನ್ನು ನೀಡಿದರು.

ಶುಕ್ರವಾರ ಬೆಳಗ್ಗೆ ರಾಷ್ಟ್ರಪತಿ ದಂಪತಿಗಳು ಸ್ವಾಮಿಯ ಸುಪ್ರಭಾತ ಸೇವೆಯಲ್ಲಿ ಪಾಲುಗೊಂಡರು. ಅನಂತರ ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯಕ್ಕೆ ಹೊರಟು ಅಮ್ಮನವರನ್ನು ಸೇವಿಸಿ ಹಿಂದಿರುಗಿದರು. ಅಂದು ಸಂಜೆ ತಿರುಮಲೆಯಲ್ಲಿ ನಡೆದ ಸಹಸ್ರದೀಪಾಲಂಕರಣ ಸೇವೆಯಲ್ಲೂ ಪಾಲುಗೊಂಡರು.

ಗುರುವಾರ ಸಂಜೆ ಸ್ವಾಮಿಯ ದರ್ಶನಾನಂತರ ರಾಷ್ಟ್ರಪತಿಗಳು ತಿರುಮಲೆಯ ಅಹೋಬಿಲಮಠಕ್ಕೆ ಹೊರಟು ಅಲ್ಲಿ ಸ್ವಲ್ಪಕಾಲವಿದ್ದು ಮಠದ ಚರಿತ್ರೆಯನ್ನು ತಿಳಿದುಕೊಂಡರು. ಅವರನ್ನು ಅಹೋಬಿಲಮಠದ ಸ್ವಾಮಿಗಳು ಶಾಲು ನೀಡಿ ಸತ್ಕರಿಸಿದರು.

## ತಿರುಮಲೆಯಲ್ಲಿ ಅಹೋಬಿಲ ಮಠದ ಸ್ವಾಮಿಗಳು

ಅಹೋಬಿಲ ಮಠದ 45 ನೆಯ ಪೀಠಾಧಿಪತಿ ಶ್ರೀ ಶ್ರೀ ಅಳಹಿಯ ಸಿಂಗರ್ ಶ್ರೀಮದ್ ಶಠಗೋಪ ಶ್ರೀ ನಾರಾಯಣ ಯತೀಂದ್ರ ಮಹಾದೇಶಿಕನ್ ಅವರು ಶ್ರೀರಂಗದಿಂದ ಅಹೋಬಿಲಕ್ಕೆ ಹೋಗುವ ಮಾರ್ಗದಲ್ಲಿ ಸ್ವಾಮಿಯ ದರ್ಶನಾರ್ಥವಾಗಿ ತಿರುಮಲೆಗೆ ಆಗಮಿಸಿ ಸ್ವಾಮಿದರ್ಶನವನ್ನು ಪಡೆದರು. ಡೆ.ಇ.ಓ. ಕೃಷ್ಣಸ್ವಾಮಿ ಆಲಯ ಪೇಷ್ಕಾರ್ ಶ್ರೀಮುನಿರತ್ನಂ ನಾಯುಡು ಆಲಯ ಡೆ.ಇ.ಓ. ಶ್ರೀ ಪಟ್ಟಾಭಿರಾಮಿರೆಡ್ಡಿ ಮೊದಲಾದವರು ಸ್ವಾಮಿಗಳಿಗೆ ಇಸ್ತಿಕಪಾಲ ಸ್ವಾಗತವನ್ನು ನೀಡಿದರು. ಮೂಲವರರ ಶಠಗೋಪದೊಡನೆ ಸ್ವಾಗತ ತಿಳಿಸಿದ ನಂತರ ಅವರನ್ನು ಸ್ವಾಮಿ ಸನ್ನಿಧಿಗೆ ಕರೆದೊಯ್ಯಲಾಯಿತು.

ಸ್ವಾಮಿಗಳು ತಿರುಮಲೆಯಲ್ಲಿ ಭಾರತದ ರಾಷ್ಟ್ರಪತಿಯವರನ್ನೂ ಭೇಟಿಯಾದರು.



## ಶ್ರೀ ಮಹಾವಿಷ್ಣುವಿನ ಆಯುಧಗಳ ವಿವರಣೆ

ಚಕ್ರ : ಸುದರ್ಶನ ವೆಂದು ಹೆಸರಾದ **ಚಕ್ರ** ಕಾಲಚಕ್ರವನ್ನು ಸೂಚಿಸುವುದಲ್ಲದೆ ಶಮದಮಗ ಳನ್ನು ನೀಡುವುದೆಂದು ವಿಷ್ಣು ಪುರಾಣದ ಹೇಳಿಕೆ. ವಿಶ್ವದಲ್ಲಿ ಶಾಂತಿ ವ್ಯವಸ್ಥೆಗಳನ್ನು ಪರಿರಕ್ಷಿಸುವ ಧರ್ಮಚಕ್ರವೆಂದೂ ಇದನ್ನು ವರ್ಣಿಸಲಾಗಿದೆ.

ಗದೆ: ಮಹಾವಿಷ್ಣುವಿನ ಕೆಳಗೈಯಿಂದ ದುಷ್ಟನಿಗ್ರಹ ಶಿಷ್ಟ ಪರಿಪಾಲನೆ ನಡೆಯುವು ದೆಂದು ಹೇಳಲಾಗಿದ್ದು ಈ ಕೈಗಳಲ್ಲೊಂದರಲ್ಲಿ ಗದೆಯನ್ನು ಹಿಡಿದಿರುತ್ತಾನೆ. ಕೌಮೋದಕಿ ಯೆಂದು ಹೆಸರು.



ಶಂಖ : ಮೌನ, ತಮಸ್ಸುಗಳಿಂದ ಪ್ರತಿನಿಧಿತವಾದ ಅವಿದ್ಯೆಯನ್ನು ಇದು ನಾಶಮಾಡುತ್ತದೆ. ಪಾಂಚಜನ್ಯವೆಂದು ಹೆಸರಾದ ಶಂಖದಲ್ಲಿ ಮಹಾವಿಷ್ಣುವು ಧ್ರುವನ ಕೆನ್ನೆಯನ್ನು ಸವರಿದನೆಂದೂ ಆಮೂಲಕ ಅವನ ಅವಿದ್ಯೆಯನ್ನು ತೊಡೆದನೆಂದೂ ಹೇಳಲಾಗಿದೆ. ಶಂಖವು ನಾದ ಬ್ರಹ್ಮವನ್ನು ಪ್ರತಿನಿಧಿಸುವುದೆಂದೂ ಹೇಳಲಾಗಿದೆ.

ಪದ್ಮ: ಭೂಮಾತೆ ತನ್ನ ಸೃಷ್ಟಿಚಕ್ರದಲ್ಲಿ ನಿರಂತರವಾಗಿ ತೊಡಗಿರುವುದನ್ನು ಇದು ಸಂಕೇತಿಸುತ್ತದೆ. ವಿಶ್ವದ ಸೊಬಗು, ಸದ್ಯೋಜಾತತೆಗಳನ್ನೂ ಇದು ಸೂಚಿಸುವುದು.

—ಶ್ರೀ ಬಿ. ವೆಂಕಟರಾಮಯ್ಯ ಐ.ಎ.ಎಸ್.

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ --- 1993

| | |
|---|---|
| 1. ಸೋಮವಾರ | ಶ್ರೀ ಮಧ್ವಾಚಾರ್ಯ ಜಯಂತಿ. |
| 2. ಮಂಗಳವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ. |
| 6. ಶನಿವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ. |
| 8. ಸೋಮವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ. |
| 9. ಬುಧವಾರ | ಕೂರತ್ತಾಳ್ವಾರ್ ವರ್ಷ ತಿರುನಕ್ಷತ್ರ. |
| 11. ಶುಕ್ರವಾರ | ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದ ಅಂಕುರಾರ್ಪಣೆ. |
| 16. ಮಂಗಳವಾರ | ಶ್ರೀನಿವಾಸ ಮಂಗಾಪುರದಲ್ಲಿ ಗರುಡೋತ್ಸವ. |
| 17. ಬುಧವಾರ | ಕಪಿಲತೀರ್ಥದಲ್ಲಿ ಶ್ರೀ ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ. |
| 19. ಶುಕ್ರವಾರ | ಮಹಾಶಿವರಾತ್ರಿ. ಶ್ರೀನಿವಾಸ ಮಂಗಾಪುರದಲ್ಲಿ ರಥೋತ್ಸವ. ಕಪಿಲತೀರ್ಥದಲ್ಲಿ ನಂದಿವಾಹನೋತ್ಸವ. |
| 20. ಶನಿವಾರ | ಕಪಿಲತೀರ್ಥದಲ್ಲಿ ಕಲ್ಯಾಣೋತ್ಸವ. |
| 22. ಸೋಮವಾರ | ಕಪಿಲತೀರ್ಥದಲ್ಲಿ ಬ್ರಹ್ಮೋತ್ಸವದ ತ್ರಿಶೂಲಸ್ನಾನ. |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಫೆಬ್ರವರಿ 1993

**ಭಾಗವತದ ಹಿರಿಮೆ**
--ಕೆ. ಕೇಶವನ್

**ಪೋತನಾಮಾತ್ಯ**
--ಬ. ನ. ಗುಂಡೂರಾವ್

**ಮುರ್ಡೇಶ್ವರ ದೇವಾಲಯ**
--ಶಂಕರ ಸಾರಡ್ಕ

**ಕಾರ್ಕಳದ ಗೋಮಟೇಶ್ವರ**
--ಆರ್. ಜಿ. ಶಾನಭಾಗ

**ಭಕ್ತಕವಿ ಮಲ್ಲರಸ**
--ಪ್ರ. ಶ್ರೀನಿವಾಸಭಟ್ಟ

**ಜೊತೆಗೆ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿಸಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.



Edited and published on behalf of T.T. Devasthanams by K. Subba Rao, M.A., and Printed at T.T.D. Press by M. Vijayakumar Reddy, Manager, T.T.D. Press, Tirupati - 517 507

